# ಜನಪದ ಹಾಲುಮತ ಮಹಾಕಾವ್ಯದ ಸೃಷ್ಟಿ ಮತ್ತು ಸಂಸ್ಕೃತಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಡಿ. ಎನ್. ಹನುಮಂತಪ್ಪ

ಮಾರ್ಗದರ್ಶಕರು
ಡಾ. ಮೊಗಳ್ಳಿಗಣೇಶ್
ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಜಾನಪದ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭

171

171

# ಜನಪದ ಹಾಲುಮತ ಮಹಾಕಾವ್ಯದ ಸೃಷ್ಟಿ ಮತ್ತು ಸಂಸ್ಕೃತಿ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಡಿ. ಎನ್. ಹನುಮಂತಪ್ಪ

'ಸಿರಿಗನ್ನಡ' ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಾರ್ಗದರ್ಶಕರು
ಡಾ. ಮೊಗಳ್ಳಿಗಣೇಶ್
ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಜಾನಪದ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭

# ಪ್ರಮಾಣ ಪತ್ರ

ಜನಪದ ಹಾಲುಮತ ಮಹಾಕಾವ್ಯದ ಸೃಷ್ಟಿ ಮತ್ತು ಸಂಸ್ಕೃತಿ ಎಂಬ ನಿಬಂಧವನ್ನು ಡಾ. ಮೊಗಳ್ಳಿ ಗಣೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 20-02-02

ಡಿ. ಎನ್. ಹನುಮಂತಪ್ಪ

ಸಂಶೋಧಕರು

ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ಪ್ರಮಾಣಪತ್ರ

**ಜನಪದ ಹಾಲುಮತ ಮಹಾಕಾವ್ಯದ ಸೃಷ್ಟಿ ಮತ್ತು ಸಂಸ್ಕೃತಿ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಡಿ. ಎನ್. ಹನುಮಂತಪ್ಪ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 20-02-02

**ಡಾ. ಮೊಗಳ್ಳಿಗಣೇಶ್**

ಮಾರ್ಗದರ್ಶಕರು

ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಸಿರಿಗನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

ಕರ್ನಾಟಕವು ಜಾನಪದ ಸಂಪತ್ತಿನ ದೃಷ್ಟಿಯಿಂದ ಅತ್ಯಂತ ಫಲವತ್ತಾದ ಕ್ಷೇತ್ರ. ಕಾಲಾನುಗುಣವಾಗಿ ನಾಗರೀಕತೆ, ವಿಜ್ಞಾನ ಮತ್ತು ತಂತ್ರಜ್ಞಾನಗಳು ತಮ್ಮ ಅಗಾಧವಾದ ಆಕರ್ಷಣ ಶಕ್ತಿಯಿಂದ ಭಾರತವನ್ನು ಹಾಗೆಯೇ ಕರ್ನಾಟಕವನ್ನು ಅನಾಮತ್ತಾಗಿ ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತಾ, ಪ್ರಾಚೀನವಾದುದನ್ನೆಲ್ಲ ತನ್ನ ಪ್ರಭಾವದಿಂದ ಗುಡಿಸಿಹಾಕುತ್ತಾ, ದಾಪುಗಾಲಿಟ್ಟು ನಡೆಯುತ್ತಾ ಹಳ್ಳಿಪಟ್ಟಣಗಳೆನ್ನದೆ ಎಲ್ಲವನ್ನೂ ಮತ್ತು ಎಲ್ಲರನ್ನೂ ತನ್ನೆಡೆಗೆ ತೆಗೆದುಕೊಳ್ಳುತ್ತಿರುವ ಈ ಸಂಕ್ರಮಣ ಸಂದರ್ಭದಲ್ಲಿಯೂ ಕೂಡ, ಪರಂಪರೆಯ ಬಗೆಗೆ ಪ್ರೀತಿ, ಆಸಕ್ತಿಗಳನ್ನು ಕಳೆದುಕೊಳ್ಳದ, ತಮ್ಮ ಮೂಲ ಸಂಸ್ಕೃತಿಯನ್ನು ಆದಷ್ಟು ಮಟ್ಟಿಗೆ ಪರೀಕ್ಷಿಸಿಕೊಳ್ಳುವ ಹಾಗೂ ಚಲಾವಣೆಗೊಳಿಸುವ ಕಾಯಕದಲ್ಲಿ ನಮ್ಮ ಗ್ರಾಮಾಂತರದ ಜನ ಮತ್ತು ಗ್ರಾಮಾಂತರದ ವೈವಿಧ್ಯಪೂರ್ಣ ಬದುಕಿನ ಬಗೆಗೆ ಇನ್ನೂ ವಿವೇಚನಾಪೂರ್ವಕವಾದ ಪ್ರೀತಿಯನ್ನು ಉಳಿಸಿಕೊಂಡಿರುವ ವಿದ್ಯಾವಂತ ಜನಾಂಗ ಕಡಿಮೆ ಪ್ರಮಾಣದಲ್ಲಿದೆಯಾದರೂ ಕಾರ್ಯನಿರತವಾಗಿದೆ ಎಂಬುದು ಸ್ಮರಣೀಯ ಸಂಗತಿ.

ಕಾಲದ ತೀವ್ರ ವೇಗದಲ್ಲಿಯೂ, ತಮ್ಮ ಸಾಹಿತ್ಯ, ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಹೃದಯಪೂರ್ವಕವಾಗಿ ಮತ್ತು ಬುದ್ಧಿಪೂರ್ವಕವಾಗಿ ಸಹ ಸಮುದಾಯಗಳು ಉಳಿಸಿಕೊಂಡು ಬರುತ್ತಿರುವುದು ನಮ್ಮ ಸಾಹಿತ್ಯ ಸಂಸ್ಕೃತಿಗಳ ಮೂಲ ಬೇರುಗಳನ್ನು ಹುಡುಕುವುದಕ್ಕೆ ಅನುವು ಮಾಡಿಕೊಡುತ್ತದೆ. ಯಾವುದೇ ದೇಶದ ಶಿಷ್ಟಸಾಹಿತ್ಯದ ಮತ್ತು ಸಂಸ್ಕೃತಿಯ ಮೂಲ ನೆಲೆ ಮತ್ತು ಸೆಲೆ ಆ ದೇಶದ ಜಾನಪದ ಸಂಸ್ಕೃತಿ ಮತ್ತು ಸಾಹಿತ್ಯದಲ್ಲಿ ಸುಪ್ತವಾಗಿ ಇರುತ್ತದೆ. ನಮ್ಮ ಆಧುನಿಕ ಕಾವ್ಯ, ಕಥೆ, ನಾಟಕ, ಕಾದಂಬರಿಗಳು ಈ ದೇಶಿ ಸಾಹಿತ್ಯದ ಶಕ್ತಿಯುತ ಪ್ರೇರಣೆಗೆ ಋಣಿಯಾಗಿವೆ.

ಜಗತ್ಪ್ರಸಿದ್ಧವಾದ ರಾಮಾಯಣ, ಮಹಾಭಾರತ, ಇಲಿಯಡ್, ಒಡಿಸ್ಸಿ, ಅರೇಬಿಯನ್ ನೈಟ್ಸ್ ಮುಂತಾದವುಗಳು ಈ ಜನಪದ ಸಾಹಿತ್ಯವು ರೂಪಿಸಿದ ಜನಪ್ರಿಯ ಆಕರ ಗ್ರಂಥಗಳಾಗಿವೆ. ನೂರಾರು ಜನ ಜನಪದ ಕವಿಗಳು ತಮ್ಮ ಕಲ್ಪನಾ ಶಕ್ತಿಗೆ, ಸೃಜನ ಶಕ್ತಿಗೆ ಮತ್ತು ಅನುಕರಣಶಕ್ತಿಗೆ ತಕ್ಕ ಹಾಗೆ ಈ ಕೃತಿಗಳಲ್ಲಿ ವೈವಿಧ್ಯವನ್ನು ಪ್ರಕಟಿಸಿರುವರು. ಫಿನ್‌ಲೆಂಡಿನಲ್ಲಿ ಕಿರುಪ್ರಮಾಣದ 'ಕಾಲೆವಾಲ' ಎಂಬ ಜನಪದ ಕಾವ್ಯ ರಾಷ್ಟ್ರೀಯ ಮಹಾಕಾವ್ಯವೆಂದು ಹೆಸರು ಪಡೆದು ಆ ದೇಶದ ರಾಷ್ಟ್ರಾಭಿಮಾನದ ದ್ಯೋತಕವಾಗಿ ಬಿಟ್ಟಿದೆ. ಕನ್ನಡದ ಭಾಗ್ಯವೆಂದರೆ, ಸಾವಿರಾರು ಕವಿತೆಗಳನ್ನು, ಕಥನಗೀತೆಗಳನ್ನು ನಮ್ಮ ಜನಪದ ಸಾಹಿತ್ಯ ಗರ್ಭೀಕರಿಸಿಕೊಂಡಿರುವುದು ಮಾತ್ರವಲ್ಲದೆ ಅಧ್ಭುತ ಪ್ರತಿಭೆಯ ಅಭಿವ್ಯಕ್ತಿಯಾಗಿ ಹತ್ತಾರು ಜನಪದ ಮಹಾಕಾವ್ಯಗಳನ್ನು ಒಳಗೊಂಡಿರುವುದು ಜನಪದ ಸಾಹಿತ್ಯದ ಶ್ರೀಮಂತಿಕೆಯನ್ನು ವರ್ಧಿಸಿವೆ. ವಕ್ತೃಗಳ ಮತ್ತು ಪ್ರಾದೇಶಿಕ ಭಿನ್ನತೆಗಳ ಕಾರಣದಿಂದಾಗಿ ಪ್ರತ್ಯೇಕ ಕಥಾನಕಗಳು ಹುಟ್ಟಿಕೊಂಡಿವೆ. ಇದುವರೆಗೆ ಕನ್ನಡದಲ್ಲಿ ಪ್ರಕಟವಾಗಿರುವ ಜನಪದ ಮಹಾಕಾವ್ಯಗಳು ಕೆಲ ಮಟ್ಟಿಗೆ ಛಂದೋಬದ್ಧವಾಗಿ ಬಹುಮಟ್ಟಿಗೆ ಪದ್ಯಗಂಧಿಯಾದ ಗದ್ಯರೂಪದಲ್ಲಿ ಕಾಣಿಸಿಕೊಂಡಿವೆ.

ಜನಪದ ಮಹಾಕಾವ್ಯಗಳಲ್ಲಿ 'ಹಾಲುಮತ' ಮಹಾಕಾವ್ಯ ತುಂಬಾ ಭಿನ್ನವಾಗಿದೆ. ಹತ್ತಾರು ವಿಭಿನ್ನ ಕಥೆಗಳು ಒಂದಕ್ಕೊಂದು ಹೆಣೆದುಕೊಂಡು ತೆಳುವಾದ ಕೊಂಡಿಯಲ್ಲಿ ಬಿಗಿಯಲ್ಪಟ್ಟು ಕಥಾ ಸಮುಚ್ಚಯ ಎನಿಸಿವೆ ಹಿಂದಿನ

ಕೃತಿಗಳು. ಆದರೆ ಹಾಲುಮತ ಮಹಾಕಾವ್ಯ ಅಖಂಡವಾಗಿ ಪದ್ಯರೂಪದಲ್ಲಿ ಸೃಷ್ಟಿಗೊಂಡಿರುವುದು ಒಬ್ಬನೆ ವಕ್ತೃ ಆದಿಯಿಂದ ಅಂತ್ಯದವರೆಗೆ ಇದನ್ನು ಹಾಡಿರುವುದು ಹಾಗೂ ಕಾವ್ಯದೊಳಗಿನ ಘಟನೆಗಳು ಒಂದಕ್ಕೊಂದು ಬಿಗಿಯಾಗಿ ಕೂಡಿಕೊಂಡು ಅವಿಚ್ಛಿನ್ನತೆಯ ಮತ್ತು ಅಖಂಡತೆಯ ಪ್ರಭಾವವನ್ನು ಸೃಷ್ಟಿಸಿರುವುದು ಬಹುಮುಖ್ಯ ಸಂಗತಿಯಾಗಿದೆ.

ಈ ಮಹಾಕಾವ್ಯದ ಅಂತರ್ಯದಲ್ಲಿಅರಳಿರುವ ಪಾತ್ರಗಳು ನೂರಾರು ಇದ್ದರೂ ಅವೆಲ್ಲ ಕಥೆಯ ಮೂಲದ್ರವ್ಯಕ್ಕೆ ನೆರವಾಗಿ ಕಾವ್ಯದ ಪರಿಣಾಮ ರಮಣೀಯತೆಯನ್ನು ಅಧಿಕಗೊಳಿಸಿವೆ. ಜನಪದ ನಾಯಕ ವಯೋವೃದ್ಧ ಶ್ರೀ ಸಿದ್ದಪ್ಪ ಬೆರುಗುಗೊಳಿಸುವ ರೀತಿಯಲ್ಲಿ ಈ ಕಾವ್ಯವನ್ನು ಹಾಡಿ, ನಿರೂಪಿಸಿದ್ದಾನೆ. ಅವನ ಕಂಠದಿಂದ ಹೊರಟ ನಾದ, ಭಾಷೆ, ಛಂದಸ್ಸು, ಕಲ್ಪನೆ, ಕಥನಕ್ರಮಗಳೆಲ್ಲ ಅಪರೂಪವಾಗಿ ಬೆಸುಗೆಗೊಂಡು ದಟ್ಟವಾದ ಪ್ರಭಾವ ಬೀರುವಲ್ಲಿ ಯಶಸ್ವಿಯಾಗಿವೆ.

ಹಾಲುಮತದ ಹುಟ್ಟು, ವಿಕಾಸ, ಕಥಾನಾಯಕ ಬೀರಪ್ಪನ ಮತ್ತು ಅವನ ಭಕ್ತರ ಜೀವನ ವೃತ್ತಾಂತ ಇವುಗಳ ಪುರಾಣಗಳು ಕಾವ್ಯದಲ್ಲಿ ವಿಸ್ತಾರ, ವ್ಯಾಪ್ತಿ, ಎತ್ತರ ಮತ್ತು ಮೌಲ್ಯ ಅಮೋಘವಾಗಿದೆ ಎಂಬ ವಿಷಯ ಈ ಕಾವ್ಯವನ್ನು ಅಭ್ಯಾಸ ಮಾಡುವ ಸಹೃದಯರಿಗೆ ಮನವರಿಕೆಯಾಗುತ್ತದೆ. ಬೀರಪ್ಪನ ಸಂಪ್ರದಾಯವನ್ನು ಕುರಿತ ತೌಲನಿಕ ಅಭ್ಯಾಸಕ್ಕೆ ಈ ಕೃತಿ ಒಂದು ಮಹತ್ವದ ಕಾಣಿಕೆಯಾಗಿದೆ.

### ೧.೧ ಜನಪದ ಮಹಾಕಾವ್ಯದ ಬಗ್ಗೆ

ಮಹಾಕಾವ್ಯ ಎಂದ ಕೂಡಲೆ ನಮ್ಮ ನೆನಪಿಗೆ ಬರುವುದು ಶಿಷ್ಟಕಾವ್ಯದ ರಚನೆಗಳು. ಒಟ್ಟು ರಾಷ್ಟ್ರಜೀವನವನ್ನೆ ಸಮಗ್ರವಾಗಿ ಬಿಂಬಿಸುವ ಕೃತಿಗಳು. ಮೌಖಿಕ ಪರಂಪರೆಯ ಮಹೋನ್ನತ ರಚನೆಗಳನ್ನು ಕೂಡ ಮಹಾಕಾವ್ಯದ ಪರಿಕಲ್ಪನೆಯಲ್ಲಿಯೇ ಪರಿಗಣಿಸಲಾಗುತ್ತದೆ. ಆದರೆ ಅದನ್ನು ಹಾಡುವ ಮತ್ತು ಕೇಳುವ ಜನರಲ್ಲಿ ಮಾತ್ರ ಈ ಪರಿಕಲ್ಪನೆ ಇಲ್ಲ. ಇಂದಿಗೂ ಅವರಲ್ಲಿ ‘ಹಾಡು’, ‘ಪದ’, ‘ಕಥೆ’ ಎಂಬ ಪ್ರಯೋಗಗಳಿವೆ. ಮೌಖಿಕ ಮಹಾಕಾವ್ಯಗಳು ಸಾಮಾನ್ಯವಾಗಿ ವೀರರ ಸಾಹಸಗಳನ್ನು ಕುರಿತಿರುತ್ತವೆ. ಅಲ್ಲದೆ ಅವುಗಳಿಗೆ ಗಾತ್ರದಲ್ಲಿ ವಿಸ್ತಾರತೆ ಇರುತ್ತದೆ. ವೀರನು ತನ್ನ ಸಮುದಾಯ ಹಿತಕ್ಕಾಗಿ ವೈರಿಗಳೊಡನೆ ಹೋರಾಡಿ ಪ್ರಾಣತ್ಯಾಗಮಾಡಿ, ಆ ಸಮುದಾಯದವರಿಗೆ ದೇವರಾಗಿರುತ್ತಾನೆ. ಇವು ಮಹಾಕಾವ್ಯದಲ್ಲಿ ಹಲವು ವೃತ್ತಾಂತಗಳಾಗಿ ರೂಪ ಪಡೆದಿರುತ್ತವೆ.[1]

ವೀರನೊಬ್ಬನ ಸಾಹಸಗಾಥೆಯು ಜನತೆಯ ಹೃದಯಾಂತರಾಳದಲ್ಲಿ ಪ್ರವೇಶಿಸಿ ಪುರಾಣವಾಗಿ ಅದು ಕಥನ ರೂಪದಲ್ಲಿ ವಸ್ತುನಿಷ್ಠ ಕಾವ್ಯವಾಗಿ ರೂಪಗೊಂಡಿರುತ್ತದೆ. ಅಂತಹ ಕಾವ್ಯವು ಕಂಠಸ್ಥವಾಗಿ ಸಾಗಿ ಬರುವಾಗ ಕಾಲ-ಕಾಲಕ್ಕೆ ಬದಲಾವಣೆಗಳನ್ನು ಹೊಂದಿ ಬೆಳೆದು ಗಾತ್ರ ಪಾತ್ರ ಮತ್ತು ಸೂತ್ರಗಳನ್ನು ವಿಸ್ತರಿಸಿಕೊಳ್ಳುತ್ತದೆ. ಹೀಗೆ ಬೆಳೆದ ಕಾವ್ಯ ಕಂಠಸ್ಥವಾಗಿ ಸಾಗಿ ಬರುವಾಗ ಒಬ್ಬ ವ್ಯಕ್ತಿಯಾಗದೆ ಸಮಷ್ಟಿಸ್ವತ್ತಾಗಿ ಪರಿಣಮಿಸಿ ಅದು ಆ ನಾಡಿನ, ಆ ಗುಂಪಿನ ಸಮಷ್ಟಿಪ್ರಜ್ಞೆಯ ಪ್ರತಿರೂಪವಾಗಿ ಆ ಜನತೆಯ ಔನ್ನತ್ಯದ ಸಂಕೇತವಾಗಿ ಆವಿರ್ಭವಿಸುತ್ತದೆ. ಹೀಗೆ ಆವಿರ್ಭವಿಸುವ ರಚನೆ ಮಹಾಕಾವ್ಯವಾಗುತ್ತದೆ. ಇಂತಹ ರಚನೆ ಏಕ ಕವಿಕೃತವಾಗದೆ ಸಮಷ್ಟಿಕೃತವಾಗಿರುವುದರಿಂದ ಇದನ್ನು ಜನಪದ ಮಹಾಕಾವ್ಯವೆಂದು ಕರೆಯಲಾಗಿದೆ. ಒಂದು ಕಥಾನಕದ ಮೇಲೆ ಮತ್ತೊಂದು ಮೈಚಾಚುತ್ತ ಹುತ್ತದಂತೆ ಬೆಳೆಯುತ್ತ ಒಂದು ಸಹಜ ಮಹಾಕಾವ್ಯವಾಗಿ ರೂಪತಾಳುತ್ತಾ ಹೋಗುತ್ತದೆ.

ಹಲವಾರು ಗಾಯಕರು ವಿಭಿನ್ನ ವೀರರಿಗೆ ಸಂಬಂಧಿಸಿದ ಕಥಾನಕಗಳಿಗೆ ಒಂದು ಸಂಬಂಧದ ಎಳೆಯನ್ನು ಜೋಡಿಸಿ ಅದನ್ನು ಒಂದು ಮಹಾಕಾವ್ಯವನ್ನಾಗಿ ರೂಪಿಸಿದರು. ಇದು ಜನಪದ ಮಹಾಕಾವ್ಯ ರೂಪಗೊಂಡ

ಬಗೆಯಾಗಿದೆ.ಜನರಲ್ಲಿ ಸ್ವಾಭಿಮಾನ, ದೇಶಾಭಿಮಾನಗಳನ್ನು ಉದ್ದೀಪಿಸುವ ಸಲುವಾಗಿ ತಮ್ಮ ಕೀಳರಿಮೆಯನ್ನು ಕಳೆದುಕೊಳ್ಳುವ ಕಾರಣದಿಂದ ಹಾಡುಗಾರರು ಉದ್ದೇಶಪೂರ್ವಕಾವಗಿಯೇ ಜನಪದ ಮಹಾಕಾವ್ಯ ಹುಟ್ಟುಹಾಕಿದರು. ಜನಪದರ ಒಟ್ಟು ಜೀವನ ವಿಧಾನವನ್ನೆ ಜನಪದ ಸಂಸ್ಕೃತಿ ಎಂದು ಅರ್ಥೈಸಲಾಗಿದೆ.

ಮೌಖಿಕ ಮಹಾಕಾವ್ಯದಲ್ಲಿ ಇತಿಹಾಸ, ಐತಿಹ್ಯ, ಪುರಾಣ, ಈ ಮೂರು ಅಂಶಗಳು ಪ್ರಮುಖವಾದವು. ತನ್ನ ಸಮುದಾಯಕ್ಕಾಗಿ ಹೋರಾಡಿ ವೀರಮರಣ ಅಪ್ಪಿ, ಸಮುದಾಯದಿಂದ ಗೌರವ, ಜನಪದರಿಂದ ಹೃದಯ ಸಂಪಾದನೆ ಇದೆಲ್ಲಾ 'ಇತಿಹಾಸ'ವಾಗುತ್ತದೆ. ಮುಂದೆ ನಾಯಕನ ಭಕ್ತಿ, ಭಯ, ವಿಕಾಸವಾಗಿ ಮುಂದುವರಿದು ನಾಯಕ ದೈವತ್ವದ ಐತಿಹ್ಯವಾಗುತ್ತದೆ. ಕಾಲಾನಂತರದಲ್ಲಿ ಇದು ಆ ಕಾವ್ಯಕ್ಕೆ ಹಲವು ಸಮುದಾಯಗಳು ಗುರುತಿಸಿಕೊಂಡು ಕಾವ್ಯ ಸಮುದಾಯವಾಗಿಯೂ ಪರಂಪರೆಯೂ ವಿಕಾಸವಾಗುತ್ತದೆ. ಪುರಾಣವಾಗಿ ದೇವರಾಗಿ ಮುಂದುವರೆಯುತ್ತದೆ. ಇದರ ಜೊತೆಯಲ್ಲೇ ಮೌಖಿಕ ಮಹಾಕಾವ್ಯ ಕಂಠಸ್ಥ ಪರಂಪರೆಯ ಸಂದರ್ಭದಲ್ಲಿ ಜನ್ಮತಳೆದು ಜೀವಂತವಾಗಿರುವ ಒಂದು ಕಾವ್ಯ ಸಂಪ್ರದಾಯ.

ಕರ್ನಾಟಕ ಜನಪದ ಅಧ್ಯಯನಕ್ಕೆ ಚಾರಿತ್ರಿಕ ಮಹತ್ವವಿದೆ. ಕರ್ನಾಟಕದಲ್ಲಿ ಅನೇಕ ಜನಪದ ಮಹಾಕಾವ್ಯಗಳಿವೆ ಎಂಬುದನ್ನು ಗುರುತಿಸಿ, ಅವುಗಳನ್ನು ಸಂಗ್ರಹಮಾಡಿ ಅದಕ್ಕೆ ಅಧ್ಯಯನದ ಚೌಕಟ್ಟು ಹಾಕಿಕೊಟ್ಟವರು ಅನೇಕ ವಿದ್ವಾಂಸರು. ಜಾನಪದದ ಪದ ಪ್ರಯೋಗ ಮಾಡಿ ಅದರ ಸ್ವರೂಪತೆಯ ಬಗ್ಗೆ ತಿಳಿಸಿದವರಲ್ಲಿ ಡಾ. ಹಾ. ಮಾ. ನಾಯಕರು, ಪ್ರೊ. ಜೀ. ಶಂ. ಪರಮಶಿವಯ್ಯನವರು ಮುಂತಾದವರು. ಆಧುನಿಕ ಸಂದರ್ಭದಲ್ಲಿ ಜಾನಪದ ಅಧ್ಯಯನದ ಸಾಧ್ಯತೆಗಳನ್ನು ಹಿಗ್ಗಿಸಿ ಕನ್ನಡದಲ್ಲಿ ಕಾವ್ಯವನ್ನು ಭಾವಗೀತೆ, ಕಥನಗೀತೆ, ಖಂಡಕಾವ್ಯ ಮತ್ತು ಮಹಾಕಾವ್ಯವೆಂದು ವರ್ಗೀಕರಿಸಲಾಗಿದೆ. ಮಹಾಕಾವ್ಯದಲ್ಲಿ ರಾಷ್ಟ್ರೀಯ ಮಹಾಕಾವ್ಯಗಳು, ಏಕಕರ್ತೃಕ ಮಹಾಕಾವ್ಯಗಳು, ಜನಪದ ಮಹಾಕಾವ್ಯಗಳು ಎಂದು ವರ್ಗೀಕರಿಸಬಹುದಾಗಿದೆ. ಜನಪದದ ಮಹಾಕಾವ್ಯಗಳು ಸೂತ್ರಾತ್ಮಕ ಮತ್ತು ಅಲಂಕಾರಿಕ ಶೈಲಿಯಲ್ಲಿರುವ ಅಸಾಧಾರಣ ವ್ಯಕ್ತಿಗಳ ಸಾಹಸವನ್ನು ಕುರಿತ ಕವನಗಳು. ಲಾವಣಿಗಳು ಬೆಳೆದು ಮಹಾಕಾವ್ಯಗಳಾಗುತ್ತವೆ. ಈ ಮೇಲಿನ ಆಲೋಚನೆಗಳು ಜನಪದ ಮಹಾಕಾವ್ಯಗಳ ಸೃಜನಶೀಲ ಧಾರೆಗೆ ಸೂಕ್ತವಾದ ವಿಚಾರಗಳಾಗಿದ್ದು ಈ ದಿಸೆಯಲ್ಲಿ ಈ ಪ್ರಬಂಧವನ್ನು ಮುಂದಿನ ಬರಹಗಳಲ್ಲಿ ವಿಸ್ತರಿಸಲಾಗಿದೆ.

**೧.೨ ಹಾಲುಮತ ಮಹಾಕಾವ್ಯದ ಅಧ್ಯಯನದ ವ್ಯಾಪ್ತಿ ವಿಧಾನ**

ಮಹಾಕಾವ್ಯ ಎಂದ ಕೂಡಲೆ ನಮ್ಮ ನೆನಪಿಗೆ ಬರುವುದು ಶಿಷ್ಟಸಾಹಿತ್ಯದ ರಚನೆಗಳು. ಆದರೆ ಮೌಖಿಕವಾಗಿ ಹರಿದುಕೊಂಡು ಬಂದಂತ ಅನೇಕ ಮಹಾಕಾವ್ಯಗಳಿಗೆ ಜೀವ ಸೃಷ್ಟಿ ಸಿಕ್ಕಿದ್ದು ೨೦ನೇ ಶತಮಾನದಲ್ಲಿ. ಅಲ್ಲಿ ಜನಪದ ಅಧ್ಯಯನವಿದೆ. ಅನೇಕ ವಿಷಯಗಳ ಕುರಿತ ಅಧ್ಯಯನ, ಸಂಶೋಧನೆ, ಕ್ಷೇತ್ರಕಾರ್ಯ, ಸಂಪಾದನೆ, ಸಂಗ್ರಹಣೆ, ಲಿಖಿತ ಬರವಣಿಗೆ ಮುಂತಾಗಿ ಜನಪದ ಸಾಹಿತ್ಯದಲ್ಲಿ ಕೃಷಿಮಾಡಲಾಯಿತು. ಅನೇಕ ಜನಪದ ಸಾಹಿತ್ಯದ ಕವಲುಗಳನ್ನು ಕಂಡುಕೊಳ್ಳಲಾಯಿತು. ಜನಪದ ಅಧ್ಯಯನಕ್ಕೆ ಶ್ರೀಮಂತಿಕೆ ಸಿಕ್ಕಿದ್ದು ಅಲ್ಲಿಂದಲೆ.

ಡಾ. ಹಾ. ಮ. ನಾಯಕರು ಜನಪದ ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿಯ ವಿಭಿನ್ನ ವಿಧಾನಗಳನ್ನು ಪರಿಚಯಿಸಿದರು. ಪಾಶ್ಚಾತ್ಯ ವಿದ್ವಾಂಸರ ಜನಪದ ಅಧ್ಯಯನದ ಅವಿರತ ಕೃಷಿಯಿಂದ ಭಾರತದಲ್ಲಿ ಕೂಡ ಜನಪದ ಅಧ್ಯಯನದ ಅನೇಕ ಮುಖಗಳು ಪರಿಚಯವಾದವು. ಜನಪದ ಅಧ್ಯಯನದಲ್ಲಿ ಅನೇಕ ವರ್ಗೀಕರಣಗಳನ್ನು ಮಾಡಬಹುದು. ಅದರಲ್ಲಿ ಪ್ರಮುಖವಾದುದು ಕಾವ್ಯ ಮತ್ತು ಮಹಾಕಾವ್ಯ. ಇದು ಮೌಖಿಕವಾಗಿ ಹರಿದುಕೊಂಡು ಬಂದಿರುವಂತದ್ದು, ಹಬ್ಬಹರಿದಿನಗಳಲ್ಲಿ, ಉತ್ಸವಗಳಲ್ಲಿ, ಸಂಪ್ರದಾಯಗಳಲ್ಲಿ, ಆಚರಣೆಗಳಲ್ಲಿ ಹಾಡುವಂತವು ಮಹಾಕಾವ್ಯಗಳಾಗಿವೆ.

ಮಹಾಕಾವ್ಯವು ತುಂಬಾ ವಿಸ್ತಾರವಾದುದು. ವೀರರ ಸಾಹಸ ಪ್ರವೃತ್ತಿಯ ಕುರಿತಾದು ಮಹಾಕಾವ್ಯವಾಗಿದೆ. ದೇವರ ಭಕ್ತಿ ಭಾವವಾಗಿ ಜಾತ್ರೆಗಳಲ್ಲಿ ನಡೆಯುವ ಆಚರಣೆಗಳಲ್ಲಿ ಕಾವ್ಯದ ಕೆಲವು ಭಾಗಗಳನ್ನು ಹಾಡಲಾಗುತ್ತದೆ. ವೀರನೊಬ್ಬನ ಸಾಹಸಗಾಥೆಯು ಜನತೆಯ ಹೃದಯಾಂತರಾಳದಲ್ಲಿ ಪ್ರವೇಶಿಸಿ, ಪುರಾಣವಾಗಿ ಅದು ಕಥನರೂಪದಲ್ಲಿ ವಸ್ತುನಿಷ್ಠ ಕಾವ್ಯವಾ। ರೂಪಗೊಳ್ಳುತ್ತದೆ. ಮಹಾಕಾವ್ಯವು ಕಂಠಸ್ಥವಾಗಿ ಸಾಗಿಬರುವಾಗ ಕಾಲಕಾಲಕ್ಕೆ ಬದಲಾವಣೆಗಳನ್ನು ಹೊಂದಿ ಬೆಳೆದು ಗಾತ್ರ, ಪಾತ್ರ, ಸೂತ್ರಗಳನ್ನು ವಿಸ್ತರಿಸಿಕೊಳ್ಳುತ್ತದೆ. ಹೀಗೆ ಬೆಳೆದ ಕಾವ್ಯ ಒಬ್ಬ ವ್ಯಕ್ತಿಯಾಗದೆ ಸಮಷ್ಠಿ ಸ್ವತ್ತಾಗಿ ಪರಿಣಮಿಸಿ ಅದು ಆ ನಾಡಿನ, ಆ ಗುಂಪಿನ ಸಮಷ್ಠಿ ಪ್ರಜ್ಞೆಯ ಪ್ರತಿರೂಪವಾಗಿ ಆ ಜನತೆಯ ಔನ್ನತ್ಯದ ಸಂಕೇತವಾಗಿ ಆರ್ವಿಭವಿಸುತ್ತದೆ. ಹೀಗೆ ಆವಿರ್ಭವಿಸುವ ರಚನೆ ಮುಂದೆ ಮಹಾಕಾವ್ಯವಾಗುತ್ತದೆ. ಇಂತಹ ರಚನೆ ಏಕಕವಿ ಕೃತವಾಗದೆ ಸಮಷ್ಠಿ ಕೃತವಾಗಿರುವುದರಿಂದ ಇದನ್ನು ಜನಪದ ಮಹಾಕಾವ್ಯವೆಂದು ಕರೆಯಲಾಗಿದೆ. ಜನಪದ ಮಹಾಕಾವ್ಯ ರೂಪುಗೊಂಡ ಬಗೆ ಹಲವಾರು ಗಾಯಕರು ವಿಭಿನ್ನ ವೀರರಿಗೆ ಸಂಬಂಧಿಸಿದ ಕಥಾನಕಗಳಿಗೆ ಒಂದು ಸಂಬಂಧದ ಎಳೆಯನ್ನು [illegible] ಅದನ್ನು ಒಂದು ಮಹಾಕಾವ್ಯವನ್ನಾಗಿ ರೂಪಿಸಿದರು. ಜನರಲ್ಲಿ ದೈವದ ನಂಬಿಕೆ, ಆಧ್ಯಾತ್ಮದ ಸ್ವಭಾವ, ಸಾಂಸ್ಕೃತಿಕ ಸ್ಮೃತಿಗಳನ್ನು ಉದ್ದೀಪಿಸುವ ಸಲುವಾಗಿ ತಮ್ಮ ಕೀಳಿರಿಮೆಯನ್ನು ಕಳೆದುಕೊಳ್ಳುವ ಕಾರಣದಿಂದ ಹಾಡುಗಾರರು ಉದ್ದೇಶಪೂರ್ವಕವಾಗಿಯೆ ಜನಪದ ಮಹಾಕಾವ್ಯ ಹುಟ್ಟು ಹಾಕಿದರು. ಮೌಖಿಕ ಮಹಾಕಾವ್ಯ ಕಂಠಸ್ಥ ಪರಂಪರೆಯ ಸಂದರ್ಭದಲ್ಲಿ ಜನ್ಮ ತಳೆದು ವೃತ್ತಿಗಾಯಕ ಸಂಪ್ರದಾಯದಿಂದ ಜೀವಂತವಾಗಿರುವ ಒಂದು ಕಾವ್ಯ ಸಂಪ್ರದಾಯವೇ ಮಹಾಕಾವ್ಯವಾಗುತ್ತದೆ. ಮೌಖಿಕ ಲೋಕದ ಸಾಮ್ರಾಜ್ಯದಲ್ಲಿ ಜನಪದರ ಹೃದಯಗಳಲ್ಲಿ ಮಹಾಕಾವ್ಯಗಳು ಹೇರಳವಾಗಿ ದೊರಕುತ್ತವೆ. ಅಂತಹ ಮಹಾಕಾವ್ಯದ ಬಗ್ಗೆ ಅದರ ವ್ಯಾಪ್ತಿಯ ವಿಧಾನದ ಬಗೆಗೆ ತಿಳಿಸುವುದಾದರೆ ಅದೊಂದು ವಿಸ್ತಾರವಾದ, ಅಧ್ಭುತವಾದ ಕಂಠಸ್ಥದಿಂದ ಕೂಡಿದ, ವೀರನ ಸಾಹಸಗಾಥೆಯನ್ನು ಸಾರುವ, ಸಂಪ್ರದಾಯವನ್ನು ಬಿಂಬಿಸುವ, ಆಯಾ ಸಂಪ್ರದಾಯದ ಪರಂಪರೆ, ಸಾಮಾಜಿಕ ಅಂಶಗಳನ್ನು ಬಿಂಬಿಸುವ ಅನೇಕ ವೃತ್ತಾಂತಗಳ ಮೂಲಕ ಬಿತ್ತರಿಸುವ ಕಾವ್ಯ ಬಹುವ್ಯಾಪ್ತಿಯ ವಿಧಾನವನ್ನು ಒಳಗೊಂಡಿರುತ್ತದೆ.

ಮೌಖಿಕ ಕಾವ್ಯಗಳಲ್ಲಿ ಮಹಾಕಾವ್ಯವಾಗಿ ಪ್ರಚಲಿತವಿರುವ ಒಂದು ಆಧ್ಯಾತ್ಮ ನಂಬಿಕೆ, ರೂಢಿಗತವಾಗಿರುವ ಕಾವ್ಯ 'ಹಾಲುಮತ ಮಹಾಕಾವ್ಯ'.[೨] ಇದೊಂದು 'ಹಾಲುಮತ' ವೆಂಬ ಜನಾಂಗದ ಸೃಷ್ಠಿ, ಸಂಸ್ಕೃತಿ, ಪರಂಪರೆ, ಆಚರಣೆ, ನಂಬಿಕೆ, ಭಕ್ತಿ, ಜೀವನಕ್ರಮ, ಸಾಮಾಜಿಕ ಜೀವನ, ಜೀವನ ನಿರ್ವಹಣೆಯ ಕಸುಬು, ಮುಂತಾದವುಗಳ ಬಗ್ಗೆ ಮಹಾಕಾವ್ಯ ಪ್ರತಿಬಿಂಬಿಸುತ್ತದೆ. ಮಹಾಕಾವ್ಯ ಹಾಡುವ ಕವಿ ಮನೋವೃತ್ತಿ, ಆಧ್ಯಾತ್ಮಿಕ ನಂಬಿಕೆ, ಅವನಲ್ಲಿನ ಕವಿತ್ವ, ಸಹೃದಯತೆ ಉಳಿಸಿ ಬೆಳೆಸಿಕೊಂಡು ಬಂದ ಜನಪದ ಸಾಹಿತ್ಯದ ಆಸಕ್ತಿ ಮಹಾಕಾವ್ಯದಲ್ಲಿ ಕಾಣಬಹುದು. ಮಹಾಕಾವ್ಯದಲ್ಲಿ ಹಾಲುಮತ ಎಂಬ ನಾಮಧೇಯ ಹೇಗೆ ಬಂತು, ಅದರ ಆಚರಣೆಗಳ ಪ್ರಭಾವವೇನು ಇತಿಹಾಸ, ಸಂಸ್ಕೃತಿ ಮುಂದೆ ಹೇಗೆ ಬೆಳೆದವು ವಿಸ್ಮಯ ಮಾಂತ್ರಿಕ ಶಕ್ತಿ ನಂಬಿಕೆಯ ದೃಢ ನಿರ್ಧಾರಗಳು, ಜನಾಂಗದ ಸೃಷ್ಠಿ ಸಂಸ್ಕೃತಿ ಬೆಳೆದು ಬಂದ ಸಂಕಷ್ಟದ ಸಂಕೀರ್ಣತೆ ಅಲ್ಲದೆ ಹಾಲುಮತ ಜನಾಂಗವನ್ನು ಶಿವನೇ ಬಂದು ಭೂಮಿಯಲ್ಲಿ ಸ್ಥಾಪಿಸಿದನೆಂಬ ಅಚಲ ನಂಬಿಕೆ ಇಂತಹ ಮೂಲ ಅಸ್ತಿತ್ವವನ್ನು ನಿರೂಪಿಸುವ ವಿಷಯಗಳು ಈ ಕಾವ್ಯದ ವ್ಯಾಪ್ತಿಯಲ್ಲಿ ಬರುವಂತಹವು.

ಮಹಾಕಾವ್ಯದಲ್ಲಿ 'ಹಾಲುಮತ' ಎಂಬ ಹೆಸರು ಬಂದಿದೆ. ಇದು ಒಂದು ವೃತ್ತಿ, ಬದುಕುವ ಪರಿ. ಹಾಲುಮತ ಮಹಾಕಾವ್ಯದಲ್ಲಿ ಶಿವ-ಪಾರ್ವತಿಯರ ಲೀಲಾವಿಲಾಸವೇ ಮುಖ್ಯ ಚೇತನವಾಗಿದೆ. ಹಾಲುಮತ ಮಹಾಕಾವ್ಯದಲ್ಲಿ ಅನೇಕ ಶಿವನ ವೃತ್ತಾಂತಗಳು ಬರುತ್ತವೆ. ಅಲ್ಲಿ ಉಪಕತೆಗಳು, ಪವಾಡಗಳು, ಮಂತ್ರಗಳು, ಶೃಂಗಾರ, ಜೀವನಕ್ರಮ ಮುಂತಾದವು ಕಾವ್ಯದಲ್ಲಿ ಅನಾವರಣಗೊಳ್ಳುತ್ತವೆ.

ಈ ಮಹಾಕಾವ್ಯವು ಉತ್ತರಕರ್ನಾಟಕದಲ್ಲಿ ತುಂಬಾ ಪ್ರಸಿದ್ಧಿ ಪಡೆದಿದ್ದು, ಹಾಲುಮತ ಜಾತಿಯ ಜನಾಂಗದ ಮೂಲವನ್ನು ಪ್ರತಿಬಿಂಬಿಸಿದೆ. ಮಹಾಕಾವ್ಯದಲ್ಲಿ ಬರುವ ಹಾಲುಮತದ ಬೆಳವಣಿಗೆಯ ಸೃಷ್ಠಿಯ ಸಂಸ್ಕೃತಿಯ ಅನೇಕ ಕಥನ ವೃತ್ತಾಂತಗಳಿವೆ. ಅವುಗಳಲ್ಲಿ 'ಕೈಲಾಸದ ಹಾಡಿಕೆ' ಒಂದು. ಇಲ್ಲಿ ಕಾವ್ಯ ಸೃಷ್ಠಿಯ ಆದಿಯಲ್ಲಿ ದೈವಸೃಷ್ಠಿಯ ಬಗ್ಗೆ ಮಾಹಿತಿ ನೀಡುತ್ತದೆ ಮಹಾಕಾವ್ಯ. "ನೀರೇ ನಿರಂಕಾರದೊಳಗ ಭೂಮಿಸಾರ ಇಲ್ಲಯ್ಯ" ಎಂದು ಕಾವ್ಯದಲ್ಲಿ ಪದಗಳು ಮೂಡಿಬರುವವು. "ಹಾಲುಮತನಂತಪ್ಪ ಹೆಸರ ಕರಿಯುತಾರೇನ" ಈ ವಾಕ್ಯವು 'ಕೈಲಾಸ ಹಾಡಿಕೆ'ಯಲ್ಲಿ ಬರುವುದು. ರಾಕ್ಷಸರನ್ನು ಕುರಿಗಳನ್ನಾಗಿ ಮಾಡಿ ದೇವರುಗಳು ಆ ಕುರಿಗಳನ್ನು ಕಾಯುವುದು ಮುಂದೆ ಪಾರ್ವತಿ ದೇವಿ ಕಾಯುವುದು, ಹುತ್ತಿನಲ್ಲಿ ಅವುಗಳನ್ನು ಬಿಡುವುದು, ಅವುಗಳಿಗೆ ಹಾಲುಣಿಸಿ ಮಣ್ಣಿನ ಗೊಂಬೆಗಳನ್ನಾಗಿ ಮಾಡಿ 'ಹಾಲುಮತ'ದವರೆಂಬ ನಾಮಧೇಯ ಮಾಡುವುದು ಕಾವ್ಯದಲ್ಲಿ ಮೂಡಿಬರುತ್ತದೆ. 'ಹುತ್ತಿನಗಡ್ಡಿ ಸೀಳ್ಯಾವೆ ಕುರಿಯ ಬಯಲಿಗ ಬಂದಾವ', 'ಬೆಂಕಿ ಶೋಧ ಆದಾವ ಕೊಬ್ಬರಿ ಶೋಧ ಆದಾವ' ಮೇಲಿನ ವಾಕ್ಯಗಳಲ್ಲಿ ಮನುಕುಲದ ವೃತ್ತಿ, ಜೀವನ ಮಾಡುವ ಪರಿ ಮುಂತಾದ ಅಂಶಗಳು ಬೆಳಕು ಚೆಲ್ಲುತ್ತವೆ. ಹೀಗೆ ಕಾವ್ಯ ಪ್ರಾರಂಭವಾಗುತ್ತ ತನ್ನ ವಿಸ್ತಾರತೆಯನ್ನು ಬಿಚ್ಚಿಕೊಳ್ಳುತ್ತಾ ಸಾಗುತ್ತದೆ.'ಬೀರಪ್ಪನ ಪೂರ್ವಜರ ವೃತ್ತಾಂತ' ಮಹಾಕಾವ್ಯದಲ್ಲಿ ಬೀರಪ್ಪನೆ 'ನಾಯಕ'ನು. ಅವನ ಪೂರ್ವಜರ ಪರಂಪರೆ, ಬೆಳೆದುಬಂದ ರೀತಿ-ನೀತಿ, ಪವಾಡಗಳು, ವೃತ್ತಿಯಲ್ಲಿ ನೈಪುಣ್ಯತೆ, ಅವರು ಬೀರಪ್ಪನ ಪೂರ್ವಜರ ವೃತ್ತಾಂತದಲ್ಲಿ ನೋಡಬಹುದಾಗಿದೆ.

"ತಿಪರೇಸೂರ ಏಳುಮಕ್ಕಳ ಸಮಧುರ ಪಾಲಮಡ್ಯಾನ", "ಕದ್ದು ಮಾಡಿದ ಹಾದರ ಗೆದ್ದು ತಂದಿನಿ ಅಂದಾಳ", "ಕಾಳಿನಾರಾಯಣ ದೇವರು ಶಿವನ ಪೂಜೆ ಮಾಡ್ಯಾನ", "ಬಾಳಭರಮದೇವ ಸೂರಮ್ಮ ದೇವಿಯರ ಮದುವೆ", ಹೀಗ ಕಾವ್ಯದಲ್ಲಿ ಹಾಲುಮತ ವಂಶ ಬೆಳೆದುಬಂದ ವಿವಿಧ ಬಗೆಯ ಸನ್ನಿವೇಶಗಳನ್ನು ಕಾಣಬಹುದು. "ಕಾಳಿ ನಾರಾಯಣ ದೇವರ ವೃತ್ತಾಂತ" ಈ ವೃತ್ತಾಂತದಲ್ಲಿ ಕಾಳಿನಾರಾಯಣ ಶಿವನಿಗೆ ಪೂಜೆ ಮಾಡುವುದು, ಕಾಶಿಗೆ ಹೋಗುವುದು, ತಾನು ಇಲ್ಲದುದರಿಂದ ಭರಮದೇವನಿಗೆ ಶಿವನ ಪೂಜೆಮಾಡಲು ತಿಳಿಸುವುದು ಅದರಂತೆ ಭರಮದೇವ ಪೂಜೆಗೆ ನಿಂತುಕೊಳ್ಳುವುದು ಇದರಿಂದ ಶಿವ ಮೆಚ್ಚಿಕೊಂಡು ಕಾಳಿನಾರಾಯಣನನ್ನು ಶಿವಪೂಜೆ ಮಾಡೆಂದು ತಿಳಿಸುವುದು, ಈ ಎಲ್ಲಾ ಅಂಶಗಳು ಕಾವ್ಯದಲ್ಲಿ ಮೆರುಗುಗೊಳಿಸಿವೆ. 'ಬೀರಪ್ಪನ ವೃತ್ತಾಂತ'ದಲ್ಲಿ ಭರಮದೇವನಾದವನು ಸೂರಮ್ಮ ದೇವಿ ಗಂಡ ಸೂರಮ್ಮದೇವಿ ಕಾಳಿನಾರಾಯಣನ ತಂಗಿ ಸೂರಮ್ಮದೇವಿ 'ಬಂಜೆ'ಯಾದ್ದರಿಂದ ಭರಮದೇವ ಶಿವನಲ್ಲಿ ಬೇಡುವುದು.

ಇದರಿಂದ ಮೆಚ್ಚಿಕೊಂಡ ಶಿವನು ಸೂರಮ್ಮ ದೇವಿಗೆ ಮಕ್ಕಳ ಫಲ ಇಲ್ಲದಿದ್ದರೂ ಸೂರಮ್ಮದೇವಿಯ ವ್ರತಕ್ಕೆ ಮಣಿದು ತನ್ನ 'ಬೆವರ'ನ್ನು ಬಟ್ಟಲಿಗೆ ತುಂಬಿಕೊಟ್ಟನು. ಇದನ್ನು ಗಂಡ-ಹೆಂಡತಿ ಇಬ್ಬರು ಸೇವಿಸುತ್ತಾರೆ. ಇದರಿಂದ ಸೂರಮ್ಮದೇವಿ ಗರ್ಭಧರಿಸುವಳು. ನಂತರ ತವರಿನ ಬಯಕೆಯಲ್ಲಿ ತವರಿನ ಬಾನ ಬಯಸುವಳು. ಅವಳಿಗೆ ಕನಸೊಂದು ಬಿದ್ದು, ತವರು ನನ್ನ ತಂದೆ-ತಾಯಿ ಹಿಂದೆನೆ ಹೋಯಿತೆಂದು ಪ್ರಲಾಪಿಸುತ್ತಾಳೆ. ನಂತರ ಅವು ತನ್ನ ಅಣ್ಣನ ಎಮ್ಮೆಗಳು ತಿಂದು ಸಾಯುವುದು, ಇದನ್ನು ಕಾಳಿನಾರಾಯಣ ನೋಡಿ ಪ್ರಲಾಪಿಸುವುದು, ತನ್ನ ತಂಗಿಯ ಬಾಣಂತನಕ್ಕೆ ಸೂಲಗಿತ್ತಿಯರನ್ನು ಕಳಿಸಿ ನಂತರ ಹುಟ್ಟುವನೆ 'ಬೀರಣ್ಣ'. ಶಿವನ ಪ್ರಸಾದದಿಂದ ಹುಟ್ಟಿದ 'ಬಾಲ ಬೀರಣ್ಣನ ವೃತ್ತಾಂತ' ಅಮೋಘವಾಗಿದೆ. ನಂತರ ಬೀರಣ್ಣನ ಮದುವೆ ವೃತ್ತಾಂತ, ಅಲ್ಲಿನ ಪವಾಡಗಳು, ದೈವಶಕ್ತಿ ರೂಪಗಳು ಅಮೋಘ ಸಾದೃಶ್ಯದಿಂದ ಕೂಡಿವೆ.

ಬೀರಣ್ಣ ಲಿಂಗದೇವರಾಗುವುದು, ಮಾಳಿಂಗರಾಯರ ಪೂರ್ವಜರ ಬಗ್ಗೆ, ಮಾಳಿಂಗರಾಯ ಲಿಂಗ ಬೀರಣ್ಣನ ಸೇವೆಯಲ್ಲಿರುವುದು, ಹೀಗೆ ಕಾವ್ಯ ಹಾಲುಮತಸ್ಥನಾದ ಬೀರಪ್ಪನ ಜೀವನ ವೃತ್ತಾಂತ ಎಳೆ ಎಳೆಯಾಗಿ

ಬಿಚ್ಚಿಕೊಳ್ಳುತ್ತಾ ಸಾಗುತ್ತದೆ. ಕಾವ್ಯವವು ತುಂಬಾ ಪ್ರಸಿದ್ಧಿಯಾಗಿರುವುದು ಇದರಿಂದಲೆ. ನಂತರ ಕಾವ್ಯದಲ್ಲಿ 'ಡಂಕನಾಡ ದೈಗೊಂಡನ ವೃತ್ತಾಂತ', 'ಅಮೋಘಸಿದ್ದನ ವೃತ್ತಾಂತ', 'ಪಾಂಡುರಂಗನ ವೃತ್ತಾಂತ', ನಂತರದಲ್ಲಿ ಇತರ ಶರಣರ ವೃತ್ತಾಂತಗಳು ಬರುವವು. ಕಾವ್ಯದಲ್ಲಿ ಬೀರಪ್ಪನ ಸೇವೆಯಲ್ಲಿ ಶರಣರೆಲ್ಲಾ ತಮ್ಮನ್ನೆಲ್ಲಾ ಸಮರ್ಪಿಸಿಕೊಳ್ಳುತ್ತಾರೆ. ಹೀಗೆ ಮಂಗಳ ಹಾಡಿನಿಂದ ಕಾವ್ಯ ಪೂರ್ಣಗೊಳ್ಳುತ್ತದೆ. ಇಷ್ಟು'ಹಾಲುಮತ ಕಾವ್ಯದ ಕಥೆಯ ಎಳೆಯ ವ್ಯಾಪ್ತಿ'ಯಾಗಿದೆ. ಕಥೆಯ ವ್ಯಾಪ್ತಿಯಲ್ಲಿ ಅನೇಕ ವೃತ್ತಾಂತಗಳು ಬರುವವು. ಅವೆಲ್ಲಾ ಶಿವನ ಪೂಜೆಯ ಫಲವಾಗಿ ದೇವರು ಕೊಟ್ಟ ಜೀವನವಾಗಿದೆ. 'ಬೀರಪ್ಪ'ನು ಶಿವನ ಪ್ರಸಾದವಾಗಿ ದೇವರಾಗಿ ಹಾಲುಮತಸ್ಥರಿಗೆ ಶಿವನಾಗಿ ಕಾವ್ಯದಲ್ಲಿ ಕಾಣುತ್ತಾನೆ.

ಹಾಲುಮತ ಕಾವ್ಯದ ವ್ಯಾಪ್ತಿಯಲ್ಲಿ ಬರುವ ಮತ್ತೊಂದು ವಿಷಯ ಕಾವ್ಯದ ಸೃಷ್ಠಿಯ ಪ್ರಕ್ರಿಯೆ. ಇದು ಅತ್ಯಂತ ಸೂಕ್ಷ್ಮವಾದುದಾಗಿದೆ. ನಿಗೂಢತೆಯಿಂದ ಕೂಡಿದೆ. ಕಾವ್ಯದ ಸೃಷ್ಠಿ ಪ್ರಕ್ರಿಯೆ ವಿಚಿತ್ರದಿಂದ ಕೂಡಿದೆ. ರಾಕ್ಷಸರನ್ನು ಕೊಂದು ಕುರಿಗಳನ್ನಾಗಿ ಮಾಡಿದನು. ಅಂತ್ತಹ ಕುರಿಗಳನ್ನು ದೇವರುಗಳೆಲ್ಲಾ ಕಾಯುತ್ತಾ ಬಂದರು. ಕೊನೆಗೆ ಪಾರ್ವತಿ ಕಾಯುತ್ತಾಳೆ. ಪಾರ್ವತಿಗೆ ಅವುಗಳ ಬಗ್ಗೆ ಅಪಾರ ಪ್ರೀತಿ ಬಂದು ಅವುಗಳನ್ನು ನಾಶಮಾಡದೆ ಭೂಮಿಯಲ್ಲಿ ಬಿಡುತ್ತಾಳೆ. ಹುತ್ತಿನಲ್ಲಿ ಅವುಗಳನ್ನು ಬಚ್ಚಿಟ್ಟು ಹುತ್ತಿಗೆ ತನ್ನ ಎದೆಯಾಲುಣಿಸಿ ಮಾನವ ಮಣ್ಣಿನ ಮೂರ್ತಿ ತಯಾರಿಸುವಳು. ಶಿವನು ಅವುಗಳಿಗೆ ಜೀವ ತುಂಬುವನು. ಹೀಗೆ ಕುರಿಗಳನ್ನು ಕಾಯಲು ಮಾನವನೆಂಬ ಜೀವಿ ಸೃಷ್ಠಿಯಾಯಿತು. ಇವರನ್ನೆ 'ಹಾಲುಮತಸ್ಥ'ರೆಂದು ಕರೆಯುವರು. ಇದು ಕಾವ್ಯದ ಸೃಷ್ಠಿಯ ಪ್ರಕ್ರಿಯೆಯನ್ನು ತೋರುತ್ತದೆ.

ಕಾವ್ಯದಲ್ಲಿ ಸಾಂಸ್ಕೃತಿಕ ನೆಲೆಗಳ ಅಂಶವನ್ನು ಕಾಣಬಹುದಾಗಿದೆ. ತಮ್ಮ ವೃತ್ತಿಯ ಬಗ್ಗೆ ಅಪಾರ ಗೌರವ, ಸಂಪ್ರದಾಯಗಳು, ಪೂಜೆಮಾಡುವುದು, ದೇವರನ್ನು ಬೇಡುವುದು,ಅನುಕಂಪ, ಪ್ರೀತಿ, ವಿಶ್ವಾಸ ತೋರಿಸುವುದು, ಹಾಲುಮತಸ್ಥರೆಂದು ಕರೆಯಿಸಿಕೊಳ್ಳುವುದು, ವೃತ್ತಿಯಲ್ಲಿ ಪ್ರಾವಿಣ್ಯತೆಗಳಿಸುವುದು, ಸ್ತ್ರೀಯರಿಗೆ ಅಪಾರ ಗೌರವ ಮನ್ನಣೆ ನೀಡುವುದು, ಮಾತೃ-ಪಿತೃಗಳನ್ನು ದೇವರಂತೆ ಕಾಣುವುದು, ಸ್ನೇಹಿತರನ್ನು, ಸಹೋದರರನ್ನು ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುವುದು, ಸಹೋದರಿಯರಿಗಾಗಿ ಶಿವನನ್ನೆ ಗೆಲ್ಲುವುದು 'ಕಾಳಿಂಗರಾಯ ಮತ್ತು ಸೂರಮ್ಮದೇವಿ ವೃತ್ತಾಂತ'ದಲ್ಲಿ ತಂಗಿಗಾಗಿ ಶಿವನನ್ನು ಮೆಚ್ಚಿಸುವುದು ಇದು ಕಾವ್ಯದ ಸಂಸ್ಕೃತಿಯ ಅಂಶಗಳನ್ನಾಗಿ ಪ್ರತಿಬಿಂಬಿಸುತ್ತದೆ. ಒಟ್ಟಾರೆ ಕಾವ್ಯವು ಸಂಸ್ಕೃತಿಯ ಕಣಜವಾಗಿದೆ.

ಕಾವ್ಯಗಲ್ಲಿ ಅನೇಕ ಸಂಕೇತಗಳು, ವಸ್ತುಗಳು, ಪವಾಡಗಳು, ತಲೆಎತ್ತಿ ನಿಲ್ಲುತ್ತವೆ. ಕಾವ್ಯದಲ್ಲಿ ಬರುವ ಅನೇಕ ವೀರಪುರುಷರೆಲ್ಲ ತಾವು ಬಳಸುವ ವಸ್ತುಗಳು, ತಾವು ತೋರುವ ಸಂಕೇತಗಳು ದೇವರಿಗೆ ಪ್ರೀತಿಯಾದವು. ದೇವರಿಂದ ಸೃಷ್ಟಿಯಾದ ದೇವಾಂಶವಿರುವ ಪವಾಡ ಪುರುಷನು ಮಾಡುವ ಅನೇಕ ಪವಾಡಗಳು ಲೋಕಕಲ್ಯಾಣದಲ್ಲಿ ಕಾರ್ಯನಿರ್ವಹಿಸಿ ಜನಮನ್ನಣೆ ಗಳಿಸಿವೆ. ಹಾಲುಮತ ಕಾವ್ಯದಲ್ಲಿ ಇಂದಿಗೂ ಇವುಗಳಿಗೆ ಪ್ರತ್ಯೇಕ ಗೌರವವಿರುವುದೆ ಇದಕ್ಕೆ ಸಾಕ್ಷಿಯಾಗಿದೆ. ಹಾಲುಮತ ಕಾವ್ಯದ ವ್ಯಾಪ್ತಿಯಲ್ಲಿ ಇವು ತಮ್ಮದೆಯಾದ ಪಾರದರ್ಶಕತೆಯನ್ನು ತೋರುವಲ್ಲಿ ಯಶಸ್ವಿಯಾಗಿವೆ.

ಕಾವ್ಯದ ವ್ಯಾಪ್ತಿಯಲ್ಲಿ ಬರುವ ಅಂಶಗಳಲ್ಲಿ ಮಾಂತ್ರಿಕ ಪವಾಡ ನಿರೂಪಣೆಗಳು ಮೈಯೆತ್ತಿ ನಿಂತಿರುವವು. ಭೂಮಂಡಲ ರಚನೆಯಲ್ಲಿ, ರಾಕ್ಷಸರನ್ನು ಕೊಲ್ಲುವ ಸಂದರ್ಭ, ಕುರಿಗಳನ್ನು ದೇವರು ಕಾಯುವಾಗ, ಭೂಮಿಯಲ್ಲಿ ಮಾನವ ನಿರ್ಮಾಣದಲ್ಲಿ, ಅವರನ್ನು ಕುರಿಕಾಯಲು ಬಿಡುವಾಗ, ದೇವರುಗಳ ಸೃಷ್ಠಿಯಾಗುವಾಗ, ಬೀರಪ್ಪನ ಅನೇಕ ಪವಾಡ ಮಾಂತ್ರಿಕ ಅಂಶಗಳು, ಕಾಳಿಂಗರಾಯ, ಮಾಳಿಂಗರಾಯ, ಅಮೋಘಸಿದ್ದನ ವೃತ್ತಾಂತಗಳಲ್ಲಿ, ಅನೇಕ ಮಾಂತ್ರಿಕ ಪವಾಡ ಅಂಶಗಳ ನಿರೂಪಣೆಯನ್ನು ಹಾಲುಮತ ಕಾವ್ಯದಲ್ಲಿ ಕಾಣಬಹುದಾಗಿದೆ.

ಹಾಲುಮತ ಕಾವ್ಯದಿಂದ ಅನೇಕ ಕಲೆಗಳು ಸೃಷ್ಟಿಯಾದವು. ಕಂಬಳಿಯಾಟ, ಕುರಿಸಾಕಾಣಿಕೆ, ಕೋಲಾಟ, ದೇವರಿಗೆ ಬಿಡುವುದು, ಕರಿಮಾಡುವುದು, ವ್ಯವಹಾರದಲ್ಲಿ ನೈಪುಣ್ಯತೆ, ಕಂಬಳಿನೇಯುವುದು, ಗುಂಡು-ಗಡಾರಿ ಎತ್ತುವುದು ಜನರಲ್ಲಿ ಉತ್ಸಾಹದ ಪ್ರದರ್ಶನ ತೋರಿಸುವುದು ಇಂದಿಗೂ ಅವು ಮಾದರಿಯಾಗಿವೆ. ಕಾವ್ಯದಲ್ಲಿ ಹಾಲುಮತಸ್ಥರು ಮಾಡಿಕೊಂಡು, ನಡೆಸಿಕೊಂಡು ಬಂದ ಪ್ರದರ್ಶನ ಅಂಶಗಳೆಲ್ಲ ಇಂದಿಗೂ ಹಾಲುಮತಸ್ಥರಲ್ಲಿ ಜೀವಾಳವಾಗಿವೆ. ಕಲೆಗಳಾಗಿ ಪರಿವರ್ತನೆಗೊಂಡು ಅವು ಅವರ ಮನರಂಜನ ಸಮಯವಾಗಿ, ಹಬ್ಬ-ಹರಿದಿನವಾಗಿವೆ. ಸಂಪ್ರದಾಯವಾಗಿ ಆಚರಣೆಯಾಗಿ ಮುಂದುವರೆದಿವೆ.

ಹಾಲುಮತ ಕಾವ್ಯಕ್ಕೆ ಪರಂಪರೆಯಿದೆ. ಸಂಪ್ರದಾಯವಿದೆ. ಅದನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುವ ಹಾಲುಮತಸ್ಥರು ಹೇರಳವಾಗಿದ್ದಾರೆ. ಅವರ ಆಚರಣೆಗಳಲ್ಲಿ ಅಚಲ ನಂಬಿಕೆಯಿದೆ. ಶ್ರದ್ಧೆಯಿಂದ, ಭಕ್ತಿಯಿಂದ ದೇವರೆಂದು ಪೂಜೆಮಾಡುವ 'ಬೀರಪ್ಪ'ನನ್ನು ಪ್ರತಿವರ್ಷ ಆತನ ಜಾತ್ರೆಮಾಡುವರು. ಆತನಲ್ಲಿ ಹರಕೆ ಕಟ್ಟುವರು, ಬೇಡುವರು. ಆತನ ಹೆಸರಿನಲ್ಲಿ ಕುರಿಗಳನ್ನು ಬಲಿಕೊಡುವರು. ಶಾಂತಿ, ನೆಮ್ಮದಿ ಬೇಡುವರು. ತಮ್ಮ ಉಳಿವಿಗಾಗಿ ನೀನೆ ನಮ್ಮನ್ನು ಕಾಪಾಡು ಶಿವ ನನ್ನಪ್ಪನೆಂದು ನಂಬಿಕೆಯ ಭಕ್ತಿಯಿಂದ ಬೇಡುವರು. ಹಾಗಾಗಿ ಕಾವ್ಯಕ್ಕೆ ಪ್ರಾಚೀನ ಪರಂಪರೆಯಿದೆ. ಇಂದಿಗೂ ಶ್ರೀಮಂತಿಕೆಯಿಂದ ಕೂಡಿದೆ.

ಹಾಲುಮತ ಕಾವ್ಯವು ಒಂದು ಸಮುದಾಯದ ಅಸ್ತಿತ್ವ ರೂಪಿಸುವಲ್ಲಿ ಹೇರಳ ಪಾತ್ರ ವಹಿಸಿದೆ. ಸಮುದಾಯದಲ್ಲಿ ಜೀವಿಸುವ ಕ್ರಮ, ಸಂಸ್ಕೃತಿ, ನಂಬಿಕೆ, ಶ್ರದ್ಧೆ, ಭಕ್ತಿ, ವಿಶ್ವಾಸದ ಅನೇಕ ಅಂಶಗಳನ್ನು ಕಾವ್ಯವು ತೋರಿಸಿಕೊಟ್ಟಿದೆ. ಕುರಿಗಳನ್ನು ಕಾಯುತ್ತಾ, ಅವುಗಳನ್ನು ಪೋಷಿಸುತ್ತಾ, ಅವುಗಳದೆ ಕಾಯಕಮಾಡಿಕೊಂಡು ಜೀವನ ಮಾಡಲು ಹುಟ್ಟಿಕೊಂಡ ಸಮುದಾಯವೇ ಹಾಲುಮತ ಸಮುದಾಯ. ಇದನ್ನು ದೇವರು ನಮಗೆ ವರನೀಡಿದ್ದಾನೆಂಬ ಅಚಲ ಶ್ರದ್ಧೆ ಸಮುದಾಯದಲ್ಲಿ ಅದರಂತೆ ಅವರದ್ದೆಯಾದ 'ಸಾಮಾಜಿಕ ರಚನೆ' ಸೃಷ್ಟಿಯಾಯಿತು. ಸಂಪ್ರದಾಯ ಆಚರಣೆ, ಸಂಸ್ಕೃತಿ, ಜೀವನಕ್ರಮ ಎಲ್ಲಾ ಬದಲಾವಣೆಗೊಳ್ಳುತ್ತಾ ಸಾಗಿತು.

ಹಾಲುಮತ ಕಾವ್ಯವನ್ನು ಒಬ್ಬನೆ ಅನಕ್ಷರಸ್ಥ ಜನಪದ ಕವಿ ಹಾಡಿದ್ದಾನೆ. ಇದು ಅವನಿಗೆ ವಂಶಪರಂಪರೆಯಾಗಿ ಬಂದ ಬಳುವಳಿ. ಉತ್ತರಕರ್ನಾಟಕದಲ್ಲಿ ಈ ಕಾವ್ಯ ಪ್ರಸಿದ್ಧಿ ಪಡೆದಿದೆ. ಇದು ಅನೇಕ ವೃತ್ತಾಂತಗಳಿಂದ ಕೂಡಿದ್ದು ಹಾಲುಮತಸ್ಥರು ಹೇಗೆ ಸೃಷ್ಟಿಯಾದರೆಂದು, ಬೆಳೆದುಬಂದರೆಂದು ಕಾವ್ಯ ತಿಳಿಸುತ್ತದೆ. ಮೌಖಿಕ ಸಂಪ್ರದಾಯಬದ್ಧವಾದ ಈ ಕಾವ್ಯವನ್ನು ಒಬ್ಬ ಕವಿಯಾಡುತ್ತಾನೆಂದರೆ ಇದರ ಸಾಂಸ್ಕೃತಿಕ ಚಾರಿತ್ರಿಕ ಮಹತ್ವವೇನೆಂಬುದು ಅರ್ಥವಾಗುತ್ತದೆ.

ಹೀಗೆ ಹಾಲುಮತ ಮಹಾಕಾವ್ಯದ ವ್ಯಾಪ್ತಿಯ ವಿಧಾನದಲ್ಲಿ ಕಥೆ-ಕಥೆ ಸೃಷ್ಟಿ ಪ್ರಕ್ರಿಯೆ, ಕಥೆಯಲ್ಲಿನ ಸಾಂಸ್ಕೃತಿಕ ಸಲೆಗಳು, ಅಲ್ಲಿಬರುವ ಕಲೆಗಳು, ವಸ್ತುಗಳು, ಪವಾಡಗಳು, ಮಾಂತ್ರಿಕ ಅಂಶಗಳು, ಪರಂಪರೆ, ಬೆಳೆದು ಬಂದ ರೀತಿ-ನೀತಿಗಳು, ಕಥೆಯಲ್ಲಿ ಬರುವ ಸಾಮಾಜಿಕ ರಚನೆಯ ಬಗ್ಗೆ, ಸಮುದಾಯದ ಸೃಷ್ಟಿಯಲ್ಲಿ ಕಾವ್ಯ, ಕಾವ್ಯದಲ್ಲಿ ಕವಿ, ಅದರ ವಿನ್ಯಾಸ, ಇಂತಹ ಅಂಶಗಳ ವ್ಯಾಪ್ತಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ ಹಾಲುಮತ ಕಾವ್ಯದಲ್ಲಿ.

ಜನಪದ ಹಾಲುಮತ ಮಹಾಕಾವ್ಯವು ಸಮುದಾಯವೊಂದರ ಸಮಗ್ರ ಚಿತ್ರಣ ನೀಡುವಂತ, ಜನಪದ ಜೀವಾಳವಾಗಿರುವಂತ ಮಹಾಕಾವ್ಯವಾಗಿದೆ. ಈ ಮಹಾಕಾವ್ಯವು ದೀರ್ಘವಾದ ಕಥನಗಳ ಗುಚ್ಛಗಳಿಂದ ಕೂಡಿರುವಂತದ್ದಾಗಿದೆ. ಇದರ ಭಾಗವನ್ನು ಯಾವುದೇ ಮೂಲೆಯಿಂದ ಅಧ್ಯಯನ ಮಾಡಿದರೂ ಭಕ್ತಿಯ

ಪರವಶತೆಯನ್ನು ಪ್ರತಿಯೊಂದರಲ್ಲೂ ನೋಡಬಹುದಾಗಿದೆ. ಜನಪದರ ಹೃದಯ ಭಾಗದಲ್ಲಿ ಈ ಮಹಾಕಾವ್ಯ ಭದ್ರನೆಲೆಯಾಗಿದೆ. ಇದಕ್ಕೆ ಪೂರಕವೆಂಬಂತೆ ಮಹಾಕಾವ್ಯದಲ್ಲಿ ಬರುವ ಕಥೆಯ ಹಂದರಗಳೇ ಸಾಕ್ಷಿಯಾಗಿವೆ.

ಜನಪದ ಹಾಲುಮತ ಮಹಾಕಾವ್ಯವು ಮೌಖಿಕ ಲೋಕದಲ್ಲಿ ತನ್ನದೆ ಸ್ಥಾನಮಾನವನ್ನು ಪಡೆದುಕೊಂಡಿದೆ. ಯಾವುದೆ ಮಹಾಕಾವ್ಯಕ್ಕಿಂತ ಕಡಿಮೆ ಇಲ್ಲದ ಇದು ತನ್ನ ಸತ್ವವನ್ನು ಸಾರುತ್ತಲೇ ಇದೆ. ಆದಿಮ ಸಮುದಾಯವೊಂದರ ಬದುಕಿನ ವೈವಿಧ್ಯತೆ ಮತ್ತು ಶ್ರೀಮಂತಿಕೆಯನ್ನು ಸಾರುವಲ್ಲಿ ಮಹಾಕಾವ್ಯ ಯಶಸ್ವಿಯಾಗಿದೆ. ಮಹಾಕಾವ್ಯದಲ್ಲಿ ಪ್ರಮುಖವಾಗಿ 'ವಿಶ್ಲೇಷಣಾತ್ಮಕ' ಗುಣವನ್ನು ಕಾಣಬಹುದಾಗಿದೆ. ಭಿನ್ನ ಸಮುದಾಯಗಳ ನಡುವಿನ ಸಂಘರ್ಷ, ಸಾಮರಸ್ಯ ಮತ್ತು ಬದುಕಿನ ಅರ್ಥವಂತಿಕೆಯನ್ನು ವಿವಿಧ ಸಮುದಾಯಗಳ ನಂಬಿಕೆ, ಮೌಲ್ಯಗಳೊಂದಿಗೆ ತೌಲನಿಕವಾಗಿ ಸಂವಾದಿಸುವ ನಿರೂಪಿಸುವ ಅಂಶಗಳನ್ನು ಹೇರಳವಾಗಿ ಕಾಣಬಹುದು.

ಮುಖ್ಯವಾಗಿ ಮೂಲ ಪಠ್ಯವನ್ನೇ ಅಧ್ಯಯನದ ಸಾಮಾಗ್ರಿಯನ್ನಾಗಿ ಇಟ್ಟುಕೊಂಡು ಅದು ಹೊರಡಿಸುವ ವಿವಿಧ ಅರ್ಥಾನ್ತರಗಳು, ಧ್ವನಿಗಳನ್ನು ಪಠ್ಯಕ್ಕನುಗುಣವಾಗಿ ನಿರೂಪಿಸಲು ಪ್ರಯತ್ನಿಸಿರುವುದು ಅಧ್ಯಯನ ವಿಧಾನದ ಒಂದು ಭಾಗವಾಗಿದೆ. ಉಳಿದಂತೆ ಜನಪದ ಮಹಾಕಾವ್ಯಗಳ ಸ್ವರೂಪ, ಅವುಗಳ ಕುರಿತಂತೆ ಬಂದಿರುವ ವಿವಿಧ ಬಗೆಯ ವ್ಯಾಖ್ಯಾನಗಳನ್ನು ಅರ್ಥೈಸಿಕೊಂಡು ಪ್ರಸ್ತುತ ಅಧ್ಯಯನದ ವಿಧಾನವನ್ನು ರೂಪಿಸಿಕೊಳ್ಳಲಾಗಿದೆ. ಉಳಿದಂತೆ ಜಾನಪದ ಅಧ್ಯಯನಿಕ್ಕಿರುವ ಸಾಧ್ಯತೆಗಳು, ವೈಜ್ಞಾನಿಕವಾದ ವಿಶ್ಲೇಷಣಾ ಕ್ರಮಗಳು, ಅಧ್ಯಯನದ ವಿಧಾನಗಳನ್ನು ಕ್ಷುಣ್ಣವಾಗಿ ಅಭ್ಯಸಿಸಿ ಪ್ರಸ್ತುತ ಅಧ್ಯಯನದ ಅಗತ್ಯಕ್ಕೆ ತಕ್ಕಂತೆ ವಿಧಾನವೊಂದನ್ನು ಅಳವಡಿಸಿಕೊಳ್ಳಲಾಗಿದೆ.

### ೧.೩ ಹಾಲುಮತ ಮಹಾಕಾವ್ಯದ ಅಧ್ಯಯನದ ಮಹತ್ವ

ಹಾಲುಮತ ಮಹಾಕಾವ್ಯವು ಕರ್ನಾಟಕದಲ್ಲಿ ಹೆಚ್ಚಾಗಿ ಪ್ರಚಲಿತವಿರುವುದು ಕನ್ನಡಿಗರಿಗೆ ಹೆಮ್ಮೆಯ ಸಂಗತಿ. ಸಮುದಾಯವೊಂದರ ಹುಟ್ಟು, ಬೆಳವಣಿಗೆ, ಅದರ ಸಮಸ್ತ ಸಾಂಸ್ಕೃತಿಕ ಚಾರಿತ್ರ್ಯವನ್ನು ಪ್ರತಿಬಿಂಬಿಸುವಲ್ಲಿ ಕಾವ್ಯ ಯಶಸ್ಸು ಕಂಡಿದೆ. ಹಾಲುಮತ ಮಹಾಕಾವ್ಯದಲ್ಲಿ ಅಧ್ಭುತ ರಚನೆಯಿದೆ. ಶೈಲಿಯಿದೆ. ಭಕ್ತಿಯ ಪರವಶತೆ ತುಂಬಿಕೊಂಡಿದೆ. ಶಿವನಲೀಲೆಗಳು, ಶಿವಪಾರ್ವತಿಯರ ಲೀಲಾ ವಿಲಾಸಗಳು ಕಾವ್ಯದಲ್ಲಿ ಮುಖ್ಯ ಚೇತನವಾಗಿ ಹರಿದಿದೆ. ಒಟ್ಟು ಸಮುದಾಯದ ಸಮಗ್ರ ಜೀವನ ಬೆಳವಣಿಗೆಯನ್ನು ಪ್ರತಿಬಿಂಬಿಸಿದೆ ಕಾವ್ಯ. ಕಾವ್ಯಕ್ಕೆ ರಾಗ, ತಾಳ, ಸಂಗೀತ, ಹಿನ್ನೆಲೆ ಎಲ್ಲಾ ತುಂಬಿಕೊಂಡಿದೆ. ಕಂಠಸ್ಥ ಜನಪದ ಕಾವ್ಯವಾಗಿರುವ ಇದೊಂದು ಬೃಹತ್ ಮಹಾಕಾವ್ಯವಾಗಿದೆ. ಬೀರಪ್ಪ ದೇವರ ಜನನ ವೃತ್ತಾಂತಗಳು, ಪೂರ್ವವೃತ್ತಾಂತಗಳು, ದೇವರ ವೃತ್ತಾಂತಗಳು, ಪವಾಡ ವೃತ್ತಾಂತಗಳು, ಭಕ್ತಿ ಭಾವ ಪೂರ್ವಕ ವೃತ್ತಾಂತಗಳು ಮುಂತಾದವು ಮಹಾಕಾವ್ಯದಲ್ಲಿ ಚೇತನವಾಗಿವೆ.

ಹಾಲುಮತ ಮಹಾಕಾವ್ಯವನ್ನು ಒಬ್ಬ ಅನಕ್ಷರಸ್ಥ, ವಯೋವೃದ್ಧ, ಜನಪದರ ಜೀವನವನ್ನೆ ಮಾಡಿಕೊಂಡಿರುವ, ಬಡವನಾದರೂ ಭಕ್ತಿಯಲ್ಲಿ ಶ್ರೀಮಂತನಾಗಿರುವ ಕಾವ್ಯದ ಮುಖ್ಯ ಹಾಡುಗಾರನಾದ ಸಿದ್ದಪ್ಪ: ಮೇಟಿ ತಂದೆ: ಭೀಮಪ್ಪ ಮೇಟಿ, ತಾಯಿ: ನಾಗಮ್ಮ: ಸಿದ್ದಪ್ಪನಿಗೆ ಈಗ ೮೦ ರ ಹರೆಯ. ವಯೋವೃದ್ದ ಹೆಂಡತಿ: ಅಕ್ಕಮ್ಮ ಇವರಿಗೆ ೮ ಜನ ಮಕ್ಕಳು. ಊರು ಸೈದಾಪುರ, ಕಲಬುರ್ಗಿ ಜಿಲ್ಲೆಯ ಶಹಪುರ ತಾಲ್ಲೂಕಿನ ಸಣ್ಣಹಳ್ಳಿ. ಇಂತಹ ಸಣ್ಣ ಹಳ್ಳಿಯ ಕಾಯಕ ಪ್ರವೃತ್ತನಾಗಿರುವ ಸಿದ್ದಪ್ಪ ಇಡಿ ಮಹಾಕಾವ್ಯವನ್ನು ನಿರರ್ಗಳವಾಗಿ ಹಾಡುವುದು ಒಂದು ಅಧ್ಬುತವೇ ಸರಿ. ಶಿಷ್ಟ ಸಾಹಿತ್ಯದಲ್ಲಿ ಲಿಖಿತ ಬರವಣಿಗೆ ಮುಖಾಂತರ ಮಹಾಕಾವ್ಯ ಬರೆದು ಮಹಾನ್ ಕವಿಗಳಾಗಿದ್ದಾರೆ. ಆದರೆ ಮಹಾಕಾವ್ಯವನ್ನು ತನ್ನ ನಾಲಗೆ ಮೇಲೆ ಸದಾ ಹಚ್ಚಹಸಿರಾಗಿಟ್ಟುಕೊಂಡಿರುವ ಮೌಖಿಕ ಕವಿ ನಿಜವಾಗಿಯೂ ಮಹಾನ್ ಅಧ್ಭುತ ಕವಿ. ಇಂತಹ ಕವಿಗಳನ್ನು ಇನ್ನೂ ಶೋಧಿಸಬೇಕಾಗಿದೆ. ಮೌಖಿಕ ಮಹಾಕಾವ್ಯಗಳ ಅಧ್ಯಯನದಿಂದ ಇಂತಹವರ ಪರಿಚಯ, ಗುಣ, ಕವಿತ್ವ ಇತರರಿಗೆ ಮಾದರಿಯಾಗಿರುತ್ತದೆ.

ಮಹಾಕಾವ್ಯವು ಹಾಲುಮತಸ್ಥರ ಮೂಲದಿಂದ ಅವರ ಸಾಮಾಜಿಕ ನೆಲೆಯವರಿಗೆ ಬೆಳಕು ಚೆಲ್ಲಿದೆ. ಅನೇಕ ವಿಷಯಗಳ ರೂಪ ಮಹಾಕಾವ್ಯವಾಗಿದೆ. ಅದೊಂದು ವೀರನ ಸಾಹಸವನ್ನು ಪ್ರತಿಬಿಂಬಿಸುವಲ್ಲಿ ಯಶಸ್ಸು ಕಂಡಿದೆ. ತುಂಬಾ ವಿಸ್ತಾರತೆಯಿಂದ ಮಹಾಕಾವ್ಯ ರೂಪುಗೊಂಡಿದೆ. ಜನತೆಯ ಹೃದಯಾಂತರಾಳದಲ್ಲಿ ಕಾವ್ಯವು ಮುಖ್ಯ ಜೀವಾಳವಾಗಿರುತ್ತದೆ. ಏಕೆಂದರೆ ಕಾವ್ಯದಲ್ಲಿ ಸಮುದಾಯದ ಸೃಷ್ಟಿ, ಸಂಸ್ಕೃತಿ, ಸಂಕೇತಗಳು ವಸ್ತುಗಳು, ಪವಾಡಗಳು, ಮಾಂತ್ರಿಕ ಅಂಶಗಳು, ಪ್ರದರ್ಶನ ಕಲೆಗಳು, ಪರಂಪರೆ, ಸಾಮಾಜಿಕ ಚಾರಿತ್ರ್ಯದ ಬೆಳವಣಿಗೆ, ಸಮುದಾಯದ ಆಚರಣೆ, ಅದರ ಬೆಳವಣಿಗೆ ಎಲ್ಲಾ ಕಾವ್ಯದಲ್ಲಿ ಮನೆಮಾಡಿಕೊಂಡಿದೆ. ಹಾಗಾಗಿ ಇದು ತುಂಬಾ ಪ್ರಸಿದ್ಧಿಪಡೆದಿದೆ. ಮಹಾಕಾವ್ಯವು ಕಾಲಕಾಲಕ್ಕೆ ಬದಲಾಗಬಹುದು. ಏಕೆಂದರೆ ಇದು ಕಂಠಸ್ಥವಾಗಿ ಹರಿದು ಬರುವಂತದ್ದು, ಹಾಗಾಗಿ ಈ ಕಾವ್ಯವನ್ನು ಬರವಣಿಗೆಯಲ್ಲಿ ಬರೆದಿಡುವುದು ಅದರ ಮಹತ್ವ ತಿಳಿಯಲು ಆದ್ಯ ಕರ್ತವ್ಯವಾಗುತ್ತದೆ. ಹೀಗೆ ಬೆಳೆದು ಬರುವಂತ ಕಾವ್ಯ ಒಬ್ಬ ವ್ಯಕ್ತಿಯಾಗದೆ ಸಮಷ್ಟಿಸ್ವತ್ತಾಗಿ ಪರಿಣಮಿಸಿ ಅದು ಆ ನಾಡಿನ, ಆ ಸಮುದಾಯದ ಸಮಷ್ಟಿಪ್ರಜ್ಞೆಯ ಪ್ರತಿರೂಪವಾಗಿ ಆ ಜನರ ಔನ್ನತ್ಯದ ಸಂಕೇತವಾಗಿ ಆವಿರ್ಭವಿಸುತ್ತದೆ.

ಮಹಾಕಾವ್ಯದಲ್ಲಿ ಒಂದು ಕಥೆಯ ಮೆಲೆ ಮತ್ತೊಂದು ಉಪಕಥೆಗಳು ಮೈಚಾಚುತ್ತಾ ಹುತ್ತದಂತೆ ಬೆಳೆಯುತ್ತಾ ಕಥೆಗೊಂದು ಶ್ರೀಮಂತಿಕೆ ತಂದು ಕೊಡುವುದರಲ್ಲಿ ಯಶಸ್ವಿಯಾಗಿದೆ. ಸಂದರ್ಭಕ್ಕೆ ತಕ್ಕಂತೆ ಕಥೆಗಳು ಕಾವ್ಯದಲ್ಲಿ ಸಾಗಿಬರುತ್ತವೆ. ಮಹಾಕಾವ್ಯವನ್ನು ಕಾಲಾನುಕಾಲಗತದಲ್ಲಿ ಅನೇಕ ಮೌಖಿಕ ಕಂಠಸ್ಥ ಕವಿಗಳು ಹಾಡುತ್ತಾ, ವೀರನಗುಣಗಾನ ಮಾಡುತ್ತಾ, ಕಥೆಗೆ ಸಂಬಂಧಿಸಿದ ಎಳೆಯನ್ನು ಜೋಡಿಸುತ್ತಾ ಅದನ್ನು ಮುಂದೆ ಮಹಾಕಾವ್ಯವನ್ನಾಗಿ ರೂಪಿಸಿರುವುದು ತಿಳಿದ ವಿಚಾರವಾಗಿದೆ. ಮಹಾಕಾವ್ಯವು ಸಮುದಾಯದ ಜನರಲ್ಲಿ ಸ್ವಾಭಿಮಾನ, ಭಕ್ತಿ, ನಯವಿನಯ, ಸಂಸ್ಕೃತಿ, ಸಂಬಂಧ, ಕಾಯಕದ ಮಹತ್ವ, ಸಮುದಾಯದಭಿಮಾನ, ಉದ್ದೀಪಿಸುವ ಸಲುವಾಗಿ ಜನರಲ್ಲಿ ಕೀಳರಿಮೆಯನ್ನು ಕಳೆದುಕೊಳ್ಳುವ ಕಾರಣದಿಂದ ಹಾಡುಗಾರರು ಉದ್ದೇಶಪೂರ್ವಕವಾಗಿ ಮಹಾಕಾವ್ಯವನ್ನು ಹುಟ್ಟು ಹಾಕಿದರು.

ಮಹಾಕಾವ್ಯದಲ್ಲಿ ನಮಗೆ ಇತಿಹಾಸದ ಪರಂಪರೆ, ಐತಿಹ್ಯದ ನಂಬಿಕೆಗಳು, ಪುರಾಣದ ಮೂಲ, ಈ ಮೂರು ಅಂಶಗಳು ಪ್ರಮುಖವಾಗಿ ಕಾಣಬರುತ್ತವೆ. ಇವು ಮೌಖಿಕ ಮಹಾಕಾವ್ಯದಲ್ಲಿ ಸಹಜವಾಗಿ ಕಂಡುಬರುವ ಪ್ರಮುಖ ಅಂಶಗಳಾಗಿವೆ. ಮಹಾಕಾವ್ಯಗಳಲ್ಲಿ ಅರೆ ಐತಿಹಾಸಿಕ ಹಾಗೂ ಅರೆ ಪೌರಾಣಿಕ ಸಂಗತಿಗಳನ್ನು ವಸ್ತುವಾಗಿ ಸ್ವೀಕರಿಸಿ ಮುಂದೆ ಅದೊಂದು ಕಥಾನಕವಾಗಿ ಬೆಳೆದಿರುವುದನ್ನು ಗಮನಿಸಬಹುದು. ಇತಿಹಾಸವನ್ನು ಸುಧಾರಿಸುವ ನಿಟ್ಟಿನಲ್ಲಿ ಯುಕ್ತ ಆಧಾರಗಳನ್ನೊದಗಿಸಿ, ಸಾಂಸ್ಕೃತಿಕ ಇತಿಹಾಸದ ಪ್ರತಿರಚನೆಗೆ ಎಡೆಮಾಡಿಕೊಡುವ ಯತ್ನ ಮಹಾಕಾವ್ಯವಾಗಿದೆ. ಹಾಲುಮತ ಸಮುದಾಯದ ಅನೇಕ ಸಾಂಸ್ಕೃತಿಕ ಇತಿಹಾಸದ ಅಂಶಗಳನ್ನು ಕಾವ್ಯ ತಿಳಿಸುವಲ್ಲಿ ಯಶಸ್ವಿಯಾಗಿದೆ.

ಹಾಲುಮತ ಮಹಾಕಾವ್ಯದಲ್ಲಿ ಅಸಾಮಾನ್ಯ ಸಾಹಸ ಕೃತ್ಯಗಳು, ಅತಿಮಾನುಷ ಪಾತ್ರಗಳ ಮೇಲುಗೈ, ಮೂರ್ತರೂಪದ ಅಂಶಗಳು, ಗತಗಾಲದಲ್ಲಿ ನಡೆದ ಕಾಲ್ಪನಿಕ ಘಟನೆಯನ್ನು ಜೀವಂತ ಸ್ವರೂಪದಲ್ಲಿ ಸಾಮಾನ್ಯರ ನಯನಗಳಿಂದ ನೋಡಿಸುವ ಯತ್ನ, ವಿಸ್ಮಯಕಾರಿ ಲೋಕದೃಷ್ಟಿ, ಮುಂತಾದ ಗುಣಗಳ ಮಹತ್ವ ಅಲ್ಲಿ ಅಡಕವಾಗಿವೆ. ಮಹಾಕಾವ್ಯದಲ್ಲಿ ನಾಯಕನು ಅನೇಕ ಸಂದಿಗ್ಧ ಸಮಸ್ಯೆಗಳನ್ನು ಎದುರಿಸುವ ಅಂಶಗಳು ಅಮೋಘವಾಗಿವೆ. ಸಮುದಾಯ ಮಹತ್ವ ತಿಳಿಸುವಲ್ಲಿ ಮಾನುಷ ಹಾಗೂ ಅತಿಮಾನುಷ ಶಕ್ತಿಗಳೊಡನೆ ಹೋರಾಡಿ ಸಮುದಾಯದ ರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸುವುದು ಮಹತ್ವದ ಸಂಗತಿಯಾಗಿದೆ. ಮಹಾಕಾವ್ಯದಲ್ಲಿ ಅನೇಕ ಸಂಘರ್ಷಗಳು ಇದ್ದರೂ ಕಾವ್ಯದುದ್ದಕ್ಕೂ ದೈವಿಕ ಮತ್ತು ಮಾನುಷ ಶಕ್ತಿಗಳು ನಾಯಕನ ಜೀವನವನ್ನು ನಿಯಂತ್ರಿಸುವ ಪರಿಯನ್ನು ಕಾಣಬಹುದಾಗಿದೆ.

ಹಾಲುಮತ ಮಹಾಕಾವ್ಯದಲ್ಲಿ ಮಾನವೀಯತೆ ಮುಖ್ಯ ಅಂಶವಾಗಿದೆ. ಸಮುದಾಯವನ್ನು ಪ್ರೀತಿಸುವಲ್ಲಿ, ಅದಕ್ಕಾಗಿ ಹೋರಾಡುವಲ್ಲಿ ನಾಯಕ ಮಾನವೀಯ ಗುಣ ಮೆರೆಯುತ್ತಾನೆ. ಅದು ಇತರರಿಗೂ ಮಹತ್ವದ ಮಾದರಿ ಅಂಶವಾಗಿದೆ. ವ್ಯಾಪಕವಾದ ನೆಲೆ, ಅನೇಕ ಪಾತ್ರ ಮತ್ತು ಘಟನೆಗಳಿಂದ ಕೂಡಿದ, ದೀರ್ಘವಾದ ಕಥೆಯ ಹರವುಳ್ಳ ರಚನೆ ಹಾಲುಮತ ಮಹಾಕಾವ್ಯವಾಗಿದೆ. ಈ ಮಹಾಕಾವ್ಯದಲ್ಲಿ ಜನಜೀವನದ ವಾಸ್ತವ ಚಿತ್ರಣಗಳಿಂದ ಕೂಡಿರುತ್ತದೆ. ಒಂದು ಸಮುದಾಯದ ಸೃಷ್ಠಿಯಲ್ಲಿ ಅವರ ಜೀವನ, ಸಂಸ್ಕೃತಿ, ಪರಂಪರೆಗಳ ಇತಿಹಾಸದ ಪ್ರತೀಕವಾಗಿ ಸಮುದಾಯ ಜನರ ಜೀವನದಲ್ಲಿ ಮಾರ್ಗದರ್ಶಿಯಾಗಿ, ಆದರ್ಶವಾಗಿ ಹಾಲುಮತ ಮಹಾಕಾವ್ಯ ರೂಪುಗೊಂಡಿದೆ.

ಒಂದು ಸಮುದಾಯದ ಆಸೆ ಆಕಾಂಕ್ಷೆಗಳನ್ನು ಅಭಿವ್ಯಕ್ತಿಸುವಲ್ಲಿ ಹಾಲುಮತ ಮಹಾಕಾವ್ಯ ಮಹತ್ವದ ಕಾವ್ಯವಾಗಿದೆ. ಮಹಾಕಾವ್ಯವು ಮೌಖಿಕ ಕವಿಯ ಮತ್ತು ಸಮುದಾಯದ ಅಭಿವ್ಯಕ್ತಿಯಾಗಿದೆ. ಅಲ್ಲದೆ ಕ್ರಮಬದ್ಧವಾದ ಸವಿಸ್ತಾರವಾದ ರಚನೆಯಿಂದ ಕೂಡಿದೆ. ಮಹಾಕಾವ್ಯದ ವೀರನಾದ ಬೀರಪ್ಪನು ದೇವಾಲಯದಲ್ಲಿ ಶಿವನಾಗಿ ಪೂಜಿಸಲ್ಪಡುತ್ತಾನೆ. ದೇವರಾಗಿದ್ದಾನೆ. ಸಾಮಾನ್ಯವೀರ ಸಮುದಾಯದಲ್ಲಿ ಮಾಂತ್ರಿಕ ಪವಾಡಗಳ ಮೂಲಕ ದೈವಾಂಶವುಳ್ಳವನಾಗಿ ಆ ಸಮುದಾಯದ ದೇವರಾಗುತ್ತಾನೆ. ಹಾಲುಮತ ಮಹಾಕಾವ್ಯದಲ್ಲಿ ವಿಸ್ತೃತ ಪೌರಾಣಿಕ ಹಾಗೂ ನಾಗರಿಕ ಪರಂಪರೆಗಳ ಜೊತೆ ಹೊಂದಾಣಿಕೆ ಇರುವುದು ಗಮನಾರ್ಹ. ಮಹಾಕಾವ್ಯದಲ್ಲಿ ನಡೆಯುವ ಸಂಗತಿಗಳಲ್ಲಿ ಗತಕಾಲದಲ್ಲಿ ನಡೆದಿದ್ದಿರಬಹುದು ಎಂದು ಕವಿ ಮತ್ತು ಸಹೃದಯರು ನಂಬಿರುತ್ತಾರೆ. ಇದು ಕಾವ್ಯದ ವಿಶೇಷಗಳಲ್ಲಿ ಒಂದಾಗಿದೆ.

ಹಾಲುಮತ ಮಹಾಕಾವ್ಯದಲ್ಲಿ ಕಾವ್ಯ ಹೇಳುವಾಗ ಸಂಗೀತಮಯವಾಗಿದ್ದು ವಾದ್ಯಗಳ ಬಳಕೆಗಳಾಗಿರುವುದು ವಿಶೇಷದ ಸಂಗತಿ. ಸಮುದಾಯದ ವೇಷ-ಭೂಷಣ ಧರಿಸಿ ಜಾತ್ರೆಗಳಲ್ಲಿ ಇಂದಿಗೂ ಪ್ರದರ್ಶಿಸುವುದು ವಿಶೇಷದ ಸಂಗತಿ. ಮಹಾಕಾವ್ಯದಲ್ಲಿ 'ಪದ್ಯ' ಮತ್ತು 'ಗದ್ಯ' ಮಿಶ್ರಣವಿರುವುದು ಗಮನಿಸಬಹುದಾಗಿದೆ. 'ಹಿಮ್ಮೇಳ' ಮತ್ತು 'ಮುಮ್ಮೇಳಗಳು' ಇದ್ದೇಇರುತ್ತವೆ ಮಹಾಕಾವ್ಯದಲ್ಲಿ. ಹಾಲುಮತ ಮಹಾಕಾವ್ಯದಲ್ಲಿ ಘಟನೆಯ ಮಧ್ಯದ ವಸ್ತು ಆಯ್ಕೆಮಾಡಿ ಭೂತ, ವರ್ತಮಾನ, ಭವಿಷ್ಯತ್‌ಗಳ ನಡುವೆ ಚಲಿಸುವಂತೆ ಕವಿ ಮಾಡಿದ್ದಾನೆ. ಸಂದರ್ಭಕ್ಕೆ ತಕ್ಕಂತೆ ಉಪಕತೆಗಳು, ಅನೇಕ ವಿವರಗಳನ್ನು ಕವಿ ಪ್ರಸ್ತಾಪ ಮಾಡುತ್ತಾನೆ. ಮಹಾಕಾವ್ಯದಲ್ಲಿ ಅನೇಕ ಚಾರಿತ್ರಿಕ ವಿವರಗಳನ್ನು ನೀಡುತ್ತಾನೆ.

ಹಾಲುಮತ ಮಹಾಕಾವ್ಯವು ಗತಕಾಲದ ಲೋಕದೃಷ್ಟಿಯನ್ನು ಅವರ ಬಯಕೆ ಬಂಧನಗಳನ್ನು ಮಾತ್ರ ಹೇಳದೆ ಅವು ಇಂದಿಗೂ ಜನರ ಜೀವನದಲ್ಲಿ ಪರಿಣಾಮಬೀರುವುದರಲ್ಲಿ ಮಹತ್ವದ ಅಂಶವಾಗಿದೆ. ಕಾವ್ಯದಲ್ಲಿ ಅನೇಕ ರೂಪಕ, ಸಂಕೇತ, ಪ್ರತಿಮೆಗಳ ವಿಚಾರಧಾರೆಗಳು ಹೇರಳವಾಗಿ ದೊರಕಿವೆ. ಅವುಗಳ ಮಹತ್ವ ಸಹೃದಯರು ಅರಿಯಬಹುದಾಗಿದೆ. ಕಾವ್ಯದಲ್ಲಿ ಅತಿಮಾನುಷ ಮಾಂತ್ರಿಕ ಪವಾಡಗಳ ನಿರೂಪಣೆಗಳು ಇವೆ. ಸಮುದಾಯದ ಬೆಳವಣಿಗೆಯಲ್ಲಿ ಇವು ಬಹುಮುಖ್ಯ ಪಾತ್ರವಹಿಸಿವೆ. ಅಲ್ಲದೆ ಇವು ನಾಯಕನಿಗೆ ದೈವಾಂಶದಿಂದ ಬಂದಿರುವಂತಹವಾಗಿವೆ. ಇವುಗಳ ಮಹತ್ವ ಕಾವ್ಯದಲ್ಲಿ ಕಾಣಬಹುದಾಗಿದೆ.

ಮಹಾಕಾವ್ಯದಲ್ಲಿನ ಸಮುದಾಯದ ಪ್ರದರ್ಶನ ಕಲೆಗಳು ಸಂದರ್ಭಕ್ಕೆ ತಕ್ಕಂತೆ, ಆಯಾ ಸನ್ನಿವೇಶಗಳ ಮೂಲಕ ತೋರಿಸುವುದು, ದೈವಾರಾಧನೆ ಮಾಡುವುದು ಕಾವ್ಯದಿಂದ ಗಮನಿಸಬಹುದಾಗಿದೆ. ಸಮುದಾಯದ ಸಾಮಾಜಿಕ ಜೀವನ ಚಿತ್ರಣ ಮಹಾಕಾವ್ಯದಲ್ಲಿ ನೋಡಬಹುದಾಗಿದೆ. ಸಂಸ್ಕೃತಿ, ವಿಚಾರ, ಆಚಾರ, ಸಂಪ್ರದಾಯ, ಆಚರಣೆ, ಶೈಲಿ ಎಲ್ಲದರಲ್ಲೂ ವಿಭಿನ್ನತೆಯನ್ನು ಕಾವ್ಯ ಕಾಯ್ದುಕೊಂಡು ಬಂದಿದೆ.

ಹೀಗೆ ಹಾಲುಮತ ಮಹಾಕಾವ್ಯದ ಅಧ್ಯಯನದ ಮಹತ್ವ ಎಲ್ಲಾ ರೀತಿಯಿಂದಲೂ ಗಮನಾರ್ಹವಾಗಿದೆ. ಏಕೆಂದರೆ ಕಾವ್ಯದ ಸಂಪೂರ್ಣ ತಿರುಳು ಅತ್ಯಂತ ವಿಭಿನ್ನವಾಗಿದೆ. ಭಕ್ತಿಯ ಪರಿವರ್ತನೆಯಿಂದ ತುಂಬಿ ಅನೇಕ

ಕಥಾನಕಗಳ ಗುಚ್ಛದಿಂದ ರೂಪಿತವಾಗಿದೆ. ಅಲ್ಲದೆ ಕಾವ್ಯ ಶಿವನಲೀಲೆಗಳನ್ನು ಪ್ರತಿಬಿಂಬಿಸಿದೆ. ಸಮುದಾಯವೊಂದರ ಹುಟ್ಟನ್ನು ಅದರ ವೃತ್ತಿಹಿನ್ನೆಲೆಯಲ್ಲಿ ಈ ಕಾವ್ಯವು ಕಟ್ಟಿಕೊಡುವ ಬಗೆ ಅಪೂರ್ವವಾದುದಾಗಿದೆ. ಕಾವ್ಯ ತನ್ನ ಅಂತರಾಳದಲ್ಲಿ ಹುದುಗಿಸಿಕೊಂಡಿರುವ ಬದುಕಿನ ಕುರಿತಾದ ನಂಬಿಕೆ, ಪ್ರೀತಿ ಅಚಲವಾದುದಾಗಿದೆ. ಹಾಗೆಯೇ ಅದು ಕಟ್ಟಿಕೊಡುವ ಸಾಂಸ್ಕೃತಿಕ ಅಂಶಗಳು ವಿಶಿಷ್ಟವಾಗಿವೆ. ಆದುದರಿಂದ ಈ ಮಹಾಕಾವ್ಯದ ಅಧ್ಯಯನಕ್ಕೆ ಹೆಚ್ಚಿನ ಮಹತ್ವವಿದೆ.

**ಅಡಿ ಟಿಪ್ಪಣಿಗಳು**

೧. ಡಾ. ಹಾ. ಮಾ. ನಾಯಕ್, **ಜನಪದದ ಸ್ವರೂಪ**, ಪು. ೮

೨. ಬೋ. ನಾ. ಬಸವರಾಜ್, **ಹಾಲುಮತದ ಹುಟ್ಟು**, ಪು. ೧೬

೩. ವೀರಣ್ಣದಂಡೆ, (ಸಂ.), ಜನಪದ ಹಾಲು ಮತದ ಮಹಾಕಾವ್ಯ, ಪು. ೩

ಜನಪದ ಹಾಲುಮತ ಮಹಾಕಾವ್ಯವೊಂದು ಸಮಗ್ರವಾದ, ದೀರ್ಘವಾದ, ವಿವರಣಾತ್ಮಕವಾದ, ವಿಶ್ಲೇಷಣಾತ್ಮಕವಾದ, ಮೌಖಿಕ ಸಂಪ್ರದಾಯದಲ್ಲಿ ಹರಿದುಕೊಂಡು ಬಂದಿರುವಂತ ಮಹಾಕಾವ್ಯ. ಚಾರಿತ್ರಿಕ ಹಿನ್ನೆಲೆಯಿರುವ ಮಹಾಕಾವ್ಯವು ಸಮುದಾಯವೊಂದರ ಅಂದರೆ ಹಾಲುಮತಸ್ಥರ ಸಮಗ್ರ ಚಿತ್ರಣ ನೀಡುತ್ತದೆ. ಅಲ್ಲದೆ ಈ ಕಾವ್ಯವು ಸಮುದಾಯವೊಂದರ ಜೀವನವಿಧಾನ, ಸಾಂಸ್ಕೃತಿಕ ಆಶಯಗಳನ್ನು ನಿರೂಪಿಸುತ್ತಲೇ ಸಮುದಾಯದ ಹುಟ್ಟು ಹೇಗಾಯಿತು ಎಂದು ವಿವರಿಸುವಲ್ಲಿ ಇಂದು ಜೀವ ವಿಜ್ಞಾನಿಗಳು ಪ್ರತಿಪಾದಿಸುತ್ತಿರುವ ಅಂಶಗಳಿಗೆ ಹತ್ತಿರವಾದ ವಿವರಗಳನ್ನು ನೀಡಲಾಗಿದೆ. ಭೂಮಿಯ ಉಗಮ ಮತ್ತು ಜೀವಿಗಳ ವಿಕಾಸದ ಕುರಿತು ಪ್ರಸ್ತಾಪಿಸುವ ಅಂಶಗಳಂತೂ ಕುತೂಹಲಕರ ರೀತಿಯಲ್ಲಿ ವೈಜ್ಞಾನಿಕ ಕ್ರಮದಲ್ಲಿವೆ. ನೀರಿನಿಂದಲೇ ಜೀವಿಗಳ ಉಗಮವಾಯಿತೆಂದು ಈ ಕಾವ್ಯವು ಪ್ರತಿಪಾದಿಸುತ್ತದೆ. ಡಾ. ವೀರಣ್ಣದಂಡೆಯವರ 'ಜನಪದ ಹಾಲುಮತ ಮಹಾಕಾವ್ಯ' ಸಂಪಾದಿತ ಕೃತಿಯನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.[1]

ಉತ್ತರ ಕರ್ನಾಟಕದ ಗುಲ್ಬರ್ಗಾ ಪರಿಸರದಲ್ಲಿ ಪ್ರಚಲಿತದಲ್ಲಿರುವ ಈ ಮಹಾಕಾವ್ಯ ಮೌಖಿಕ ಸಂಪ್ರದಾಯದಲ್ಲಿ ನಿರೂಪಣೆ ನೀಡಿದಂತಹ ಗಾಯಕ ಸಿದ್ಧಪ್ಪಮೇಟಿ ಮೂಲತಃ ಅನಕ್ಷರಸ್ಥರು. ಜೀವಿಸಲು ಕೃಷಿಯನ್ನವಲಂಬಿಸಿದ ಇವರು ಹಬ್ಬಹರಿದಿನಗಳಲ್ಲಿ ಧಾರ್ಮಿಕ ಮತ್ತು ಸಾಂಪ್ರದಾಯಿಕ ಆಚರಣೆಗಳ ಭಾಗವಾಗಿ ಈ ಮಹಾಕಾವ್ಯವನ್ನು ಇತರ ಗಾಯಕರೊಂದಿಗೆ ಸೇರಿ ಸುಶ್ರಾವ್ಯವಾಗಿ ಹಾಡುತ್ತಾರೆ. ಇವರಿಗೆ ಈ ಮಹಾಕಾವ್ಯವು ಪರಂಪರೆಯ ಬಳುವಳಿಯಾಗಿ ಬಂದಿರುವಂತಹದ್ದು.

**೨.೧. ಕೈಲಾಸದ ಹಾಡಿಕೆ**

**ನೀರೇ ನಿರಂಕಾರದೊಳಗ ಭೂಮಿನಾರ ಇಲ್ಲಯ್ಯ**

ಈ ಭೂಮಿಯಲ್ಲಿ ಕೇವಲ ನೀರು ಮಾತ್ರ ಇತ್ತು. ಏನು ಇರಲಿಲ್ಲ. ಒಂದು ಜಡವಸ್ತುವಿನಂತೆ ಇದು ಇತ್ತು. ಆಗ ಇದ್ದಕ್ಕಿದ್ದಂತೆ ನೀರ ಮೇಲೆ ಒಂದು ಗುಳ್ಳೆ ಎದ್ದು ನಂತರ ರುಂಡ ಉತ್ಪತ್ತಿಯಾಗಿ ಇದಕ್ಕೆ ದೇಹ, ಕೈಕಾಲುಗಳು ಮೂಡಿದವು. ಒಳಗಡೆ ನರಗಳು ಮೂಡಿ ಅಖಂಡೇಶ್ವರ ತಯಾರಾದನು. ನಂತರದಲ್ಲಿ ಮಾತು, ಮಂತ್ರ, ನಾದಗಳು, ಅಕ್ಷರಗಳು ಜನಸಿದವು. ಅಖಂಡೇಶ್ವರನ ದೇಹದಲ್ಲಿಯೂ ನಾದ ಮತ್ತು ಜ್ಯೋತಿರ್ಲಿಂಗ ಎಲ್ಲಾ ಹುಟ್ಟಿಕೊಂಡವು. ಇದರಿಂದ ಜ್ಞಾನ ವಿದ್ಯೆ ಜನಿಸಿ ಒಟ್ಟಾರೆ ಅಖಂಡೇಶ್ವರನ ಪಿಂಡಾಂಡ ತಯಾರಾಯಿತು. ನೀರೇ ನಿಂಕಾರದಲ್ಲಿ ನಿರ್ಭಯ ವಸ್ತುವಾಗಿ ಅಖಂಡೇಶ್ವರ ಎರಡು ಯುಗ ಜೀವಿಸಿ ನಂತರ ತಾನೇ ತನ್ನ ಎಡಪಕ್ಕದ ಮೂರು ಗಣಿಕೆ ಎಲುವು ತೆಗೆದು ಅವುಗಳಿಗೆ ಮಂತ್ರಹಾಕಿ ಅದರಿಂದ ಆದಿಶಕ್ತಿ ನಿರ್ಮಾಣ ಮಾಡಿದ. ಅಲ್ಲಿಂದ ಕಾಮ, ಕ್ರೋಧ, ಮೋಹ-ಮತ್ಸರಗಳು ತಾಂಡವವಾಡಿದವು. ಅಖಂಡೇಶ್ವರನ ಮಡದಿಯಾಗಿ ಎಡಕ್ಕೆ ಬಂದಳು. ಆದಿಶಕ್ತಿ ಒಳಗೆ ಬೀಜದ ಮೇಲೆ ಅಂಕುರ ಪುಟಿದು ಗರ್ಭಿಣಿಯಾದಳು. ಇದರಿಂದ ರಾಕ್ಷಸರು ಹುಟ್ಟಿದರು. ಇಷ್ಟೊತ್ತಿಗೆ ಮೂರು ಯುಗಗಳು ಕಳೆದಿದ್ದವು. ಎಲ್ಲಿ ನೋಡಿದರು. ಅಂಧಕಾರ... ಭೂಮಿ ಇಲ್ಲಾ, ಆಕಾಶ ಇಲ್ಲಾ, ಅಂಧಕಾರದಲ್ಲಿ ಗಾಳಿ ಪ್ರಾರಂಭವಾಯಿತು. ಗಾಳಿ ನೀರಿನಲ್ಲಿ ಅಲೆಗಳನ್ನು ಎಬ್ಬಿಸಿತು. ಇದರಿಂದ ನೀರಿನಲ್ಲಿ 'ನಿರ್ಮೂಲ ಬೀಜಗಳು' ಹುಟ್ಟಿ ಲಕ್ಷಾನುಗಟ್ಟಲೆ ಅಂಡಾಂಡ-ಪಿಂಡಾಂಡಗಳು ಹುಟ್ಟಿದವು.

ಅದರಲ್ಲಿ 'ಬಸವಣ್ಣ'ನು ಹುಟ್ಟಿದ. ನೀರಿಗೆ ಹೆಪ್ಪುಕೊಟ್ಟು ತನ್ನ ಶಂಖದೊಳಗೆ ಕುಳಿತನು. 'ಕಾಡಿ'ನಲ್ಲಿ ಎಲ್ಲಮ್ಮ ಜನಿಸಿದಳು. ಪ್ರಪಂಚವನ್ನೆ ತನ್ನ ಮುಷ್ಠಿಯಲ್ಲಿ ಹಿಡಿದಳು. ನಂತರದಲ್ಲಿ ಸೂರ್ಯ-ಚಂದ್ರರು ಹುಟ್ಟಿದರು. ಇದರಿಂದ ಹಗಲು-ರಾತ್ರಿ ಪ್ರಾರಂಭವಾಯಿತು. ಗಳಿಗೆ, ವಾರ, ತಿಥಿ, ಅಮವಾಸ್ಯೆ-ಹುಣ್ಣಿಮೆ ಎಲ್ಲಾ 'ದೇವತೆ'ಗಳ ಜನನವಾಯಿತು. ಆ ದೇವತೆಯಲ್ಲಿ 'ಶಾಂತ ಮುತ್ಯಾ' ತಯಾರಾದ. ಈತ ಬಹಳ ಕಾಟ, ಪೀಡೆ ನೀಡುತ್ತಿದ್ದ ಐದು ಮಂದಿ ರಕ್ಕಸರನ್ನು ಕೊಂದು ಅವರ ಪಾಪದ ಫಲವಾಗಿ ಅವರನ್ನು ಕುರಿಗಳನ್ನಾಗಿ ನಿರ್ಮಿಸಿದ. ಮತ್ತೊಬ್ಬ ರಾಕ್ಷಸನನ್ನು ಕೊಂದು ಅವನನ್ನು 'ಟಗರ'ನ್ನಾಗಿ ಮಾಡಿದ. ನಂತರ ಅವುಗಳನ್ನು ತಾನೇ ಸಲುಹಿದನು. ಅವುಗಳ ಉಣ್ಣೆಯಿಂದ ಕಂಬಳಿ ಮಾಡಿ, ಅಸುರರಲ್ಲಿ ಬಲಿಷ್ಟನಾದ 'ಡೊಳ್ಳಾಸುರ'ನನ್ನು ನಿರ್ನಾಮ ಮಾಡಿ ಕಂಬಳಿನೇಯಲು ಬೇಕಾದ ಪರಿಕರಗಳು, ಶಂಖ, ಡೊಳ್ಳು, ತಾಳ, ಕತ್ತರಿ ಮುಂತಾದವು ತಯಾರಿಸಿದ. ನಂತರ 'ಸುಖದ ಕೊಳಲು', 'ದುಃಖದ ಕೊಳಲು' ನಿರ್ಮಿಸಿ ಕಂಬಳಿಯಿಂದ ಶಿವಪಾರ್ವತಿಯರಿಗೆ ಪೂಜೆ ಮಾಡಿದ.

### ಹಾಲುಮತವನಂತಪ್ಪ ಹೆಸರ ಕರಿಯುತಾರೇನ

ಪಾರ್ವತಿಯನ್ನು ಶಿವನಿಗೆ ಕೊಟ್ಟು ಮದುವೆ ಮಾಡಿದ ಸಂದರ್ಭದಲ್ಲಿ ಶಾಂತ ಮುತ್ಯಾ ವಡ್ಡಿಪಾಲಗ ಸಮೇತ ಬಂದು ಕಂಬಳಿ ಪೂಜೆ ಮಾಡಲು ಕುರಿಕಾಯುವ ಆತನಿಗೆ ಬೇಸರ ಬಂದು ಬ್ರಹ್ಮನಿಗೆ ಕುರಿಕಾಯಲು ಹಚ್ಚಿದ ನಂತರ ವಿಷ್ಣು, ರುದ್ರ, ಮಹಾದೇವ, ಮಹೇಶ ಎಲ್ಲಾರು ಒಬ್ಬರಾದಂತೆ ಒಬ್ಬರು ಕುರಿಗಳನ್ನು ಕಾಯ್ದರು. ಮಹಾದೇವನಿಗೆ ಬೇಸರವಾಗಲು ಅವನ ಹೆಂಡತಿ ಪಾರ್ವತಿ ಷಣ್ಮುಖನನ್ನು ಬಗಲಲ್ಲಿ ಎತ್ತಿಕೊಂಡು ಸ್ವರ್ಗದ ಭೂಮಿಯಲ್ಲಿ ಕುರಿಕಾಯಲು ತೊಡಗಿದಳು. ಆಕೆಗೂ ಬೇಸರವಾಗಲು ತನ್ನ ನಂತರ ಕುರಿಕಾಯುವವರು ಯಾರು ಇರದೆ ಸ್ವರ್ಗದ ಬಾಗಿಲು ತೆರೆದು ಕುರಿಗಳನ್ನು ಮರ್ತ್ಯಲೋಕಕ್ಕೆ ಹೊಡೆದಳು. ಕನ್ನಡ ನಾಡಿನ ಬಂಕಾಪುರದ ಭೂಮಿಯಲ್ಲಿ ಮೂರು ಕಣ್ಣಿನ ಹುತ್ತ ನೋಡಿ, ಕುರಿಗಳನ್ನು ಹುತ್ತಿನಲ್ಲಿ ಹೊಗಸಿದಳು. ಅದರ ಮೇಲೆ ಮುತ್ತಲ ಗಿಡ ನೆಟ್ಟಳು. ಮಗನನ್ನು ಕೆಳಗಿಳಿಸಿ ಕೈಕಾಲು ಮುಖ ತೊಳೆದು ಭೂಮಿ ಮೇಲೆ ಕುಳಿತು ತನ್ನ ಎಡಕಿನ ಕೈಯಲ್ಲಿ ಹುತ್ತಿನ ಮಣ್ಣು ಹಿಡಿದು ಬಲಕೈಯಲ್ಲಿ ಬಲಮೊಲೆಯ ಹಾಲು ಹಿಂಡಿ ಕೆಸರ ಮುದ್ದೆ ಮಾಡಿ ಅದರಿಂದ ಎರಡು ಮಣ್ಣು ಗೊಂಬೆಗಳನ್ನು ಮಾಡಿದಳು. ಎಡಗೈ ಮಣ್ಣಿನಿಂದ ಹೆಣ್ಣುಗೊಂಬೆ, ಬಲಗೈ ಮಣ್ಣಿನಿಂದ ಗಂಡುಗೊಂಬೆ ತಯಾರಿಸಿದಳು. ಅಷ್ಟರಲ್ಲಿ ಪಾರ್ವತಿಯನ್ನು ಹುಡುಕುತ್ತಾ ಶಿವನು ಅಲ್ಲಿಗೆ ಬಂದನು. ಆತನಿಂದ ಆ ಎರಡು ಗೊಂಬೆಗಳಿಗೂ ಜೀವ ತುಂಬಿಸಿದಳು. ನಂತರ ಅವುಗಳಿಗೆ ಹಾಲುಮತ ಎಂದು ಶಿವಪಾರ್ವತಿಯರು ಕರೆದರು. ಮುಂದೆ ಅವಗೆ 'ಮುದ್ದವ್ವ', 'ಮುದ್ದುಗೊಂಡ'ನೆಂದು ಕರಿಸಿಕೊಂಡು, ಗಂಡ-ಹೆಂಡತಿಯರಾಗಿ, ಭೂಲೋಕದಲ್ಲಿ ಕೀರ್ತಿ ತರಲಿ ಎಂದು ದೇವತೆಗಳು ಹಾರೈಸಿದರು. ನಂತರ ಈ ದಂಪತಿಗಳಿಗೆ ಆದಿಗೊಂಡ, ಅನಂತಗೊಂಡ, ಸಿದ್ದಗೊಂಡ, ಪದುಮಗೊಂಡ ಎಂಬ ನಾಲ್ಕು ಜನ ಗಂಡುಮಕ್ಕಳು ಜನಿಸಿದರು.

### ಹುತ್ತಿನಗಡ್ಡಿ ಸೀಳ್ಯಾವ ಕುರಿಯ ಬಯಲಿಗೆ ಬಂದಾವ

ಮುದ್ದವ್ವಮುದ್ದಗೊಂಡ ಮಕ್ಕಳು ದೊಡ್ಡವರಾಗಿ ಒಕ್ಕಲುತನ ಮಾಡುವಾಗ ಕಿರಿಯವನು ಕೆಲಸಮಾಡದೆ ಸೋಮಾರಿ ಎಂದು ಅತ್ತಿಗೆಯವರು ಬೈಯ್ಯುವರು. ತಾಯಿಯ ಸಲಹೆ ಮೇರೆಗೆ ಕಿರಿಯವನು ಹೊಲಕ್ಕೆ ಹೋಗಿ ಯಾತಾಳ, ಭೂತಾಳಗಳ ಸಹಾಯದಿಂದ ಮೇವು ಸಂಗ್ರಹಿಸಿ ಮನೆಗೆ ತಂದನು. ಆದರೂ ಹೆಂಡಿರ ಮಾತು ಕೇಳಿ ಅಣ್ಣಂದಿರು ಅವನನ್ನು ಬೇರೆ ಹಾಕಿದರು. ಕರಿಕೆಹೊಲ, ಕುಂಟ ಎತ್ತುಗಳು ಅವನಿಗೆ ಕೊಟ್ಟರು. ಮುಂಜಾನೆ ಕೆಲಸಕ್ಕೆ ಹೋದ ತಾಯಿ ಬುತ್ತಿ ತರುವಾಗ ಅಣ್ಣಂದಿರು ತಾಯಿಯ ಬುತ್ತಿಯನ್ನು ಬೇಡಿ ತಿಂದರು. ನಂತರ ಹೊಲದಲ್ಲಿ ಕಿರಿಯವನು ಊಟಮಾಡುವಾಗ ಅಣ್ಣಂದಿರನ್ನು ಕರೆದನು. ಅವರು ಬಂದು ನೋಡಿದರೆ ಬುತ್ತಿಯಲ್ಲಿ ಎಲ್ಲಾ ಹಾಗೆ ಇದೆ. ಅವನ ಉದಾರತೆಗೆ ಅವನಲ್ಲಿ ದೈವಾಂಶವಿತ್ತು. ನಂತರ ತಾಯಿ ಹುತ್ತ ತೋರಿಸಿ ಅದಕ್ಕೆ ಹತ್ತದಂತೆ ಹೊಡಿ ಎಂದಾಗ ಅಕಸ್ಮಾತ್ತಾಗಿ ಹುತ್ತಕ್ಕೆ ನೇಗಿಲು ತಗುಲಿ ಹುತ್ತ ಹೋಳಾಯಿತು. ಒಳಗಿನಿಂದ ಅನೇಕ ಕುರಿಗಳು ಬಂದವು. ಇದರಿಂದ ಹೊಲದ ತುಂಬೆಲ್ಲಾ ಕುರಿಗಳೇ ಆದವು.

### ಬೆಂಕಿ ಶೋಧ ಆದಾವ ಕೊಬ್ಬರಿ ಶೋಧ ಆದಾವ

ಬಂಕಾಪುರದ ಭೂಮಿಯಲ್ಲಿ ನಾನಾ ತರಹದ ಕುರಿಗಳು ಹೊರಬಂದವು. ಬಂಗಾರಕೋಡಿನ ಟಗರು ಮೇಲೆ ಬರುವಾಗ ಹುತ್ತವನ್ನು ತಿರುವಿ ಬಗೆದಿತು. ಪದುಮಗೊಂಡ ಕುರಿಗಳನ್ನೆ ಬೆನ್ನು ಹತ್ತಿದ. ರಾತ್ರಿಯಾದಲ್ಲಿ ನಿಲ್ಲುತ್ತ ಸತತ ಮೂರುದಿನ ಊಟ ಇಲ್ಲದೆ ಕುರಿ ಹಿಂದೆ ನಡೆದ. ಶಿವನು ಕೈಲಾಸದಿಂದ ಇಲ್ಲಿಗೆ ಬಂದು ಕ್ಷೇಮ ವಿಚಾರಿಸಿದ. ಹಸಿವು ಎಂದು ತಿಳಿಸಿದಾಗ ಶಿವನು ಹಸಿಯ ಹಾಲಿದೆ ಬಿಸಿಯ ಗಿಣ್ಣ ಮಾಡೋಣ ಎದುರಿನ ಗುಡ್ಡಕ್ಕೆ ಹೋಗಿ ಬೆಂಕಿ ತಗೊಂಡು ಬಾ ಕುರಿ ಕಾಯುತ್ತೇನೆಂದು ಶಿವ ಹೇಳಿದಾಗ ಪದುಮಗೊಂಡ ಗುಡ್ಡಕ್ಕೆ ಬಂದಾಗ ಗುಡ್ಡದ ಬಿರುಕಿನಲ್ಲಿ ಹೊಗೆ ಬರುವುದು ಕಂಡು ಏಳುಗಜಕಲ್ಲು ತೆಗೆದಾಗ ಅಲ್ಲಿ ಕನ್ಯೆಯನ್ನು ಕಂಡನು. ಕ್ಷೇಮ ವಿಚಾರಮಾಡಿದಾಗ ಆಕೆ 'ಜಕ್ಕಪುರದ ಅರಸನ ಮಗಳೆಂದು' ತಿಳಿಯಿತು. ಆಕೆಯಿಂದ ಬೆಂಕಿ ಬೇಡಿ ಪಡೆದ. ಆಕೆ ನನಗೂ ಗಿಣ್ಣ ತಂದುಕೊಡಿ ಎಂದಾಗ ಒಪ್ಪಿ ಶಿವನಲ್ಲಿಗೆ ಬಂದನು. ಶಿವನು ಪದುಮಗೊಂಡನಿಗೆ ಗಿಣ್ಣ ಮಾಡುವುದನ್ನೆಲ್ಲಾ ಕಲಿಸಿದನು. ಇಬ್ಬರು ಊಟ ಮಾಡಿದರು. ನಂತರ ಗುಡ್ಡದ ಹುಡುಗಿಗೆ ಗಿಣ್ಣ ಕೊಡಬೇಕೆಂದು ಶಿವನಿಗೆ ತಿಳಿಸಿ ಬಂದ. ಅವಳು ಅದನ್ನು ತಿಂದು ಪಂಚಾಮೃತವಿದ್ದಂತೆ ಇದೆಯೆಂದು ಅವನನ್ನೆ ಹಿಂಬಾಲಿಸಿದಳು. ಇದನ್ನು ರಾಕ್ಷಸಿ ನೋಡಿ ಅವರನ್ನು ತಿನ್ನಲು ಬಂತು. ಇಬ್ಬರು ಓಡಿ ಕುರಿಗಳ ಕಡೆಗೆ ಬಂದು ಒಂದು ಕುರಿಮರಿಯನ್ನು ರಾಕ್ಷಸಿಗೆ ಒಗೆದನು. ಅದು ತಿಂದ ರಾಕ್ಷಸಿಗೆ ಪದುಮಗೊಂಡ ಹೀಗೆ ಹೇಳಿದ. ಕುರಿಮರಿ ತಿಂದ ನೀನು ಮುಂದೆ 'ತೋಳ'ವಾಗೆಂದು ಹೇಳಿದ. ನಂತರ ಶಿವನು ಅವರಿಬ್ಬರ ಮದುವೆ ಮಾಡಬೇಕೆಂದು ತಿಳಿದು ಎಲ್ಲಾ ದೇವತೆಗಳನ್ನು ಕರೆಸಿದ. ಎಲ್ಲರೂ ಮದುವೆಗೆ ಸಿದ್ಧತೆ ಮಾಡಿದರು. ಸುರಗಿ ಸುತ್ತಲು ನೂಲು ಸಿಗದಿದ್ದಾಗ ಕುರಿಯ ಉಣ್ಣೆಯ ಕಂಕಣವನ್ನೆ ಬಳಸಿದರು. ಇವರ ವಂಶಜರೆ 'ಹುಣ್ಣೆಕಂಕಣ'ದವರೆಂದು ಪ್ರಚಲಿತರಾದರು. ಇಬ್ಬರು ಮುಂದೆ ಕುರಿಕಾಯುತ್ತ ಸಾಗಿದರು.

### ಮಡ್ಡ್ಯಾಗ್ಹುಟ್ಯಾನಂದಾನೆ ಮಡ್ಡಪ್ಪನಂತ ಕರದಾನ

ಪದ್ಮಗೊಂಡ, ಶಿವಲಿಂಗಮ್ಮ ಕುರಿಕಾಯುತ್ತಾ ಹೊರಟರು. ಕತ್ತಲಾದಲ್ಲಿ ನಿಲ್ಲುತ್ತಿದ್ದರು. ಹೀಗೆ ಶಿವಲಿಂಗಮ್ಮ ಗರ್ಭಿಣಿಯಾಗಿ ಗಂಡುಮಗು ಹುಟ್ಟಿತು. ಅದಕ್ಕೆ 'ಮಡ್ಡಪ್ಪ' ಎಂದು ಕರೆದರು. ಏಕೆಂದರೆ ಅದು ಅಡವಿಯಲ್ಲಿ ಹುಟ್ಟಿತ್ತು. ಅದಕ್ಕೆ ಮೂರುವರೆ ಗೇಣಿನ ಹುಟ್ಟುಗಂಬಳಿ ತಯಾರಿಸಿದ. ಮಡ್ಡಪ್ಪ ನಾಲ್ಕೈದು ವರ್ಷದವನಾದಾಗ ರಾತ್ರಿಯಲ್ಲಿ ಗಂಡ ಒಂದುಕಡೆ, ಹೆಂಡತಿ ಒಂದು ಕಡೆ ಮಲಗಿ ಬೆಳಿಗ್ಗೆ ಕುರಿಕಾಯುತ್ತಾ ಹಾಗೆ ಹೋದರು ಕೂಸು ಮರೆತು. ಸಾಯಂಕಾಲ ಇಬ್ಬರು ಭೇಟಿಯಾದಾಗ ಕೂಸು ತಪ್ಪಿರುವುದು ಅರಿತರು. ಮಡ್ಡಪ್ಪ ಕಂಬಳಿ ಹೆಗಲ ಮೇಲೆ ಹಾಕಿಕೊಂಡು ಬಂದನು. ಕಾಡಾಳುಗಳು ಕಲ್ಲಿನ ಡೋಣಿಯಲ್ಲಿ ಹಾಲು ಸುರಿಯುತ್ತಿದ್ದವು. ಅದನ್ನು ನೋಡಿ ಅಲ್ಲೆ ಮರವೇರಿ ಕುಳಿತು ಅವು ಆಹಾರಕ್ಕೆಂದು ಹೋದಾಗ ಹಾಲುಕುಡಿದು ಮತ್ತೇ ಅಲ್ಲೆ ಇರುತ್ತಿದ್ದ. ಇದನ್ನರಿತ ಕಾಡಾಕಳುಗಳು ಅವನನ್ನು ನೋಡಿದವು. ಮಡ್ಡಪ್ಪ ತಬ್ಬಲಿಯೆಂದು ಅರಿತು ಅವನನ್ನು ತಮ್ಮಲ್ಲಿಯೆ ಇಟ್ಟುಕೊಂಡವು.

ಅನೇಕ ವರ್ಷ ಕಳೆದವು. ಮಡ್ಡಪ್ಪ ಅಲ್ಲೇ ಇದ್ದ ಜೀವಾಳ ಕಡ್ಡಿ ತಂದು ಸುಖದ-ದುಃಖದ ಎರಡು ಕೊಳಲನ್ನು ನಿರ್ಮಿಸಿದ. ಸುಖದ ಕೊಳಲು ನುಡಿಸಿದಾಗ ಹಸುಗಳು ಸಂತೋಷದಿಂದ ಮೇಯುತ್ತಿದ್ದವು. ದುಃಖದ ಕೊಳಲು ನುಡಿಸಿದಾಗ ಧಾವಿಸಿಬರುತ್ತಿದ್ದವು. ಹೀಗೆ ಅನೇಕ ವರ್ಷ ಕಳೆದು ಮಡ್ಡಪ್ಪ ಇಪ್ಪತ್ತೈದು ವರ್ಷದವನಾದನು. ಮಡ್ಡಪ್ಪ ಇರುವ ಅಡವಿ ಸಮೀಪ ಒಂದು ಹಳ್ಳಿಯಲ್ಲಿ 'ಗಾಣಿಗರ ಮಲ್ಲಪ್ಪ'ನಿದ್ದನು. ಅವನು ತುಂಬಾ ಬಡವನಾಗಿದ್ದು, ಒಮ್ಮೆ ಕೆಲಸವಿಲ್ಲದೆ ಅಡವಿಯಲ್ಲಿ ಅಲೆಯುತ್ತಿರುವಾಗ ಇಬ್ಬರಿಗೆ ಭೇಟಿಯಾಗಿ ಹಾಲಿನ ಡೋಣಿ ತೋರಿಸಿದಾಗ ಮಲ್ಲಪ್ಪ ಮತ್ತು ಮನೆ ಮಂದಿಯಲ್ಲ ಹಾಲುಕುಡಿದು ಸಂಭ್ರಮಿಸಿದರು. ಮುಂದೆ ಮಲ್ಲಪ್ಪ ಹಾಲಿನ ವ್ಯಾಪಾರ ಮಾಡಿ ಶ್ರೀಮಂತನಾದನು. ಇಷ್ಟೆಲ್ಲಾ ಮಾಡಿದ ಮಡ್ಡಪ್ಪನಿಗೆ ಗಾಣಿಗರ ಮಲ್ಲಪ್ಪ

ತನ್ನ ಮಗಳನ್ನು ಕೊಟ್ಟನು. ಇದಕ್ಕೆ ಮಲ್ಲಪ್ಪನಿಗೆ ಮೂರು ಮೊಳದ ಕಂಬಳಿ ಕೊಟ್ಟು, ಗೌಳಿಗನಾಗಿರು ಹತ್ತು ಎಮ್ಮೆಯಲ್ಲಿ ಒಂದು ಹಸು ಇರಲಿ ಎಂದು ತಿಳಿಸಿದ. ಅದಕ್ಕೆ ಮಲ್ಲಪ್ಪ ಒಪ್ಪಿದ. ಮಡ್ಡಪ್ಪನ ಹೊಟ್ಟೆಯಿಂದಿ ಮುಂದೆ 'ಅಡಿವೆಪ್ಪ' ಹುಟ್ಟಿದ.

ಇತ್ತ ಮಗನನ್ನು ಕಳೆದುಕೊಂಡ ಪದ್ಮಗೊಂಡ, ಶಿವಲಿಂಗಮ್ಮ, ಮಲ್ಲಪ್ಪನ ಹತ್ತಿರವಿರುವ ಕಂಬಳಿನೋಡಿ ವಿಚಾರಿಸಿದನು. ಆಗ ಎಲ್ಲಾರು ಸೇರಿಕೊಂಡರು. ಕಾಡಿನಲ್ಲಿ ಇವರು ಇದ್ದಿದ್ದರಿಂದ ಇವರಿಗೆ 'ಕಾಡುಕುರುಬ'ರೆಂದು, ಪದ್ಮಗೊಂಡನ ಮಕ್ಕಳಲ್ಲೆರು 'ಗೊಂಡಕುರುಬ'ರೆಂದು ಪ್ರಸಿದ್ಧಿಯಾದರು.

**೨.೨ ಬೀರಪ್ಪನ ಪೂರ್ವಜರ ವೃತ್ತಾಂತ**

**ತಿಪರೇಸೂರ ಏಳುಮಕ್ಕಳ ಸಮದುರಪಾಲ ಮಾಡ್ಯಾನ**

ತಿಪರೇಸೂರನೆಂಬ ತಿಪರಂಗಿ ನಾಡಿನ ಅರಸ ಅವನ ಹೆಂಡತಿ ತಿಪ್ಪಾದೇವಿ ಇವರಿಗೆ ಏಳುಮಂದಿ ಹೆಣ್ಣುಮಕ್ಕಳು. ಇವರೆಲ್ಲ ವಯಸ್ಸಿಗೆ ಬಂದ ಕಾರಣ ಇವರಿಗೆ ಮದುವೆ ಮಾಡಲು ಏಳುಜನ ಅಣ್ಣತಮ್ಮಂದಿರನ್ನು ಹುಡುಕಿ ಮದುವೆ ಮಾಡಬೇಕೆಂದು ನಿಶ್ಚಯಿಸಿದ. ಆದರೆ ಅಂತಹ ಸಂಬಂಧ ದೊರೆಯಲಿಲ್ಲ. ತಮ್ಮ ವಾರಿಗೆಯ ಹುಡುಗಿಯರು ಮದುವೆಯಾಗಿ, ಮಕ್ಕಳ ತಾಯಂದಿರು ಆದುದನ್ನು ನೋಡಿ 'ನಮ್ಮಪ್ಪ ನಮ್ಮನ್ನು ಗೊಡ್ಡಕೆಡವಿ'ದನೆಂದರು. ಇದು ಸೇವಕಿಯರಿಂದ ಅರಸರ ಕಿವಿಗೆ ಬಿತ್ತು. ಇದರಿಂದ ವರಗಳನ್ನು ಹುಡುಕಿ ಬರುವುದಾಗಿ ಅರಸ ಕುದುರೆ ಏರಿ ಹೊರಟ. ನಡುವೆ ಒಂದು ಹೊಳೆಯ ಹತ್ತಿರ ಊಟಮಾಡಿದ. ಅದೇ ಸಂಕ್ರಾಂತಿಯಾಗಿ ಪ್ರಚಲಿತದಲ್ಲಿದೆ. ಅಲ್ಲೆ ಸಮಯ ಕಳೆದು ಮನೆಗೆ ಬಂದ. ಎಲ್ಲಾ ವರ ನೋಡಿ ಬಂದೆ ಎಂದು ಸುಳ್ಳು ಹೇಳಿ ಎಲ್ಲಾರನ್ನು ಕರೆದೊಯ್ದನು. ಹೊಳೆಯಲ್ಲಿ ಸ್ನಾನಮಾಡಿರೆಂದು ಸುಳ್ಳುಹೇಳಿ ಎಲ್ಲಾರಿಗೆ ನೀರು ಹಾಕುವ ನೆಪದಲ್ಲಿ ಸುಳಿಗೆ ಸಿಲುಕಿಸಿದ. ಆರು ಜನರು ನೀರು ಪಾಲಾದರು. ಆದರೆ ಒಬ್ಬಳು ಮಾತ್ರ ನೀರು ಪಾಲಾಗದೆ ಹೊರಬಂದಳು. ಅವಳೇ 'ಕಮಾಳಾದೇವಿ'. ಅವಳನ್ನು ಮನೆಗೆ ಕರೆದುಕೊಂಡು ಬಂದು ಹೂವಿನ ತೂಕದಲ್ಲಿಟ್ಟು ಏಳಂತಸ್ಥಿನ ಮಹಡಿಯಲ್ಲಿಟ್ಟು ಅನೇಕ ವರ್ಷಗಳಾದ ಬಳಿಕ ಅವಳಿಗೆ ನೆರೆಕೂದಲು ಬಂದಿದ್ದನ್ನು ಗಮನಿಸಿ ಅವಳನ್ನು ಮಹಾನ್ ಪತಿವ್ರತೆಯೆಂದು ಮೆರವಣಿಗೆ ಮಾಡುವಾಗ ನಾರದ ವಿಚಾರಿಸಲು 'ನನ್ನಂತ ಪತಿವ್ರತೆ ಮೂರು ಲೋಕದಲ್ಲಿ ಇಲ್ಲ' ಎಂದು ತಿಳಿಸಿದಳು. ಆಗ ನಾರದ ಲಕ್ಷ್ಮಿ, ಸಲಸ್ವತಿ, ಪಾರ್ವತಿ ಇವರಿಗೆ ಚಾಡಿ ಹೇಳಿ ಕೋಪ ಬರಿಸಿದ.

**ಕದ್ದು ಮಾಡಿದ ಹಾದರ ಗೆದ್ದು ತಂದಿನಿ ಅಂದಾಳ**

ಲಕ್ಷ್ಮಿ, ಪಾರ್ವತಿ, ಸರಸ್ವತಿ ಎಲ್ಲಾರು ಕೂಡಿ ಕಮಳಾದೇವಿ ಪಾತಿವ್ರತ್ಯ ಹಾಳು ಮಾಡುವಂತೆ ಶಿವನಿಗೆ ಒತ್ತಾಯಿಸುತ್ತಾರೆ. ಶಿವನು ಇದಕ್ಕೆ ಒಪ್ಪಿ ತಿಪರಂಗಿ ನಾಡಿಗೆ ಬಂದಾಗ ಅರಸ ಅರಮನೆಗೆ ಕರೆದೊಯ್ಯುತ್ತಾನೆ. ಶಿವನು ಕಮಾಳಾದೇವಿಯನ್ನು ಬಯಸಿ ಬೇಡಿದಾಗ ಅರಸ ನಿನ್ನಂತ ಸನ್ಯಾಸಿಗೆ ಕೊಡುವುದಿಲ್ಲವೆಂದು ತಿಳಿಸಿ ಕಳುಹಿಸುತ್ತಾನೆ. ಶಿವನು ಊರ ಹೊರಗೆ ಬಂದು ಬುಡಬುಡಕೆ ವೇಷಧರಿಸಿ ಕಮಳಾದೇವಿಗೆ ಡಬ್ಬಣದ ಬೇನೆ ತರಿಸಿದ. ಎಲ್ಲಾ ತರಹದ ಬೇನೆ ವಾಸಿ ಮಾಡುವೆನೆಂದು ಊರಲ್ಲೆಲ್ಲ ತಿಳಿಸಿದಾಗ ಕಮಾಳದೇವಿಯ ಬೇನೆ ವಾಸಿ ಮಾಡಲು ಕರೆದೊಯ್ಯುವರು. ಮದುವೆಯಾದವರಿಗೆ ಮಾತ್ರ ಔಷಧ ನೀಡುವುದಾಗಿ ಬುಡಬುಡಕಿಯವನು ತಿಳಿಸುವನು. ಊರಿದ ಕೂಡಲೆ ಸಸ್ಯವಾಗಿ ಬೆಳೆದು ಗಿಡ ಔಷಧಿ ಅದಕ್ಕೆ ಅವಳಿಂದ ಮದುವೆಮಾಡಬೇಕೆಂದು ತಿಳಿಸುವನು. ಅರಸ ಅದಕ್ಕೆ ಒಪ್ಪಿದ. ಬೀಜ ನೀಡಿ ಅವನು ಸಾದೃಶ್ಯನಾಗುವನು. ಮದುವೆಗೆ ಎಲ್ಲಾ ಸಿದ್ಧತೆ ಮಾಡುವಾಗ ಇದ್ದಕ್ಕಿದ್ದಂತೆ ಕೋಲ್ಮಿಂಚು ಹೊಡೆದು ಕಮಳಾದೇವಿ ಗರ್ಭವತಿಯಾಗುವಳು. ಇದನ್ನು ಅರಿತ ಸೇವಕಿಯರು ಬೆದರಿ ಏನು ಮಾಡುವುದೆಂದು ತೋಚದೆ ಇರುವಾಗ ದಿನೇ ದಿನೇ ಗರ್ಭ ಬೆಳೆಯಲಾರಂಭಿಸಿತು.

ಇತ್ತಕಡೆ ಪಾರ್ವತಿ 'ಶಿವನು ಕದ್ದುಮಾಡಿದ ಹಾದರವನ್ನು ಗೆದ್ದು ತರುವೆನೆಂದು' ಕೊರವಂಜಿ ವೇಷಧರಿಸಿ ಅರಮನೆಗೆ ಬಂದು ನಿಂತಾಗ ಸೇವಕಿಯರೆಲ್ಲರು ಜನಿಸಿದ ಕೂಸನ್ನು ಅರಮನೆಯಿಂದ ಎಸೆದಾಗ ಕೊರವಂಜಿಯ ಬುಟ್ಟಿಯಲ್ಲಿ ಅದು ಬೀಳುತ್ತದೆ. ಅದನ್ನು ತಲೆಮೇಲಿಟ್ಟುಕೊಂಡು ಪಾರ್ವತಿ ಕೈಲಾಸಕ್ಕೆ ಹೊರಟಾಗ ಶಿವನು ಹದ್ದಾಗಿ ಬಂದು ಬುಟ್ಟಿಯಲ್ಲಿದ್ದ ಮಗುವನ್ನು ತೆಗೆದುಕೊಂಡು ಹೋಗಿ ಜಂಬೂದ್ವೀಪದ ಗಡ್ಡಿಯ ಕಮಲದ ಹೂವಿನಲ್ಲಿ ಇಡುವನು. ಶಿವನು ಹಾದರ ಮಾಡಿದ ವಿಷಯವನ್ನು ವಿಷ್ಣು-ಬ್ರಹ್ಮರೆದುರಿಗೆ ಸ್ಪಷ್ಟಪಡಿಸಲು ಸಾಕ್ಷಿ ಸಮೇತ ಪಾರ್ವತಿ ಬುಟ್ಟಿ ತೋರಿಸಿದಾಗ ಬುಟ್ಟಿಯಲ್ಲಿ ಏನೂ ಇರದಿದ್ದನ್ನು ನೋಡಿ ಪಾರ್ವತಿ ಗಾಬರಿಯಾಗಿ ಬೆವರುತ್ತಾಳೆ. ಅದರಿಂದ ಮೈನ ಬೆವರಿನ ಮಣ್ಣತೆಗೆದು ಗೊಂಬೆ ಮಾಡಿ ಶಿವನಿಂದ ಮಂತ್ರ ಜೀವ ತುಂಬಿಸಿ ಆ ಮಗುವಿಗೆ 'ಅಮೋಘಸಿದ್ದ'ನೆಂದು ಹೆಸರಿಟ್ಟಳು.

**ಕಾಳಿನಾರಾಯಣ ದೇವರು ಶಿವನ ಪೂಜೆ ಮಾಡ್ಯಾನ**

ಕಾಳಿನಾರಾಯಣ ದೇವರು ಶಿವನ ಆರಾಧಕ, ಭಕ್ತ. ಪ್ರತಿದಿನ 'ಖಾಸಬಾಗದ' ಹೂವ ಮತ್ತು 'ನಾಗರಬಾವಿ' ನೀರಿನಿಂದ ಪೂಜೆ ಮಾಡುತ್ತಿದ್ದ. ಒಮ್ಮೆ ಶಿವನು ಜಂಬುದ್ವೀಪದ ನಡುಗಡ್ಡಿಯ ಬಗೀಚಹೂ ಮತ್ತು ಸೀತಾಳ ಹೂ ಬಯಸುವನು. ಅಲ್ಲಿಗೆ ಹೋಗಲು ಕಾಳಿನಾರಾಯಣನಿಗೆ ಮೂರು ಹರಳು ಕೊಡುವನು. ಇದರ ಸಹಾಯದಿಂದ ಜಂಬೂದ್ವೀಪಕ್ಕೆ ಅವನು ಬರುವನು. ಅಲ್ಲಿಂದ ಎಲ್ಲಾ ತೆಗೆದುಕೊಂಡು ಬಂದು ಶಿವನಿಗೆ ಪೂಜೆ ಮಾಡುವನು. ಪಾರ್ವತಿ ಆರತಿ ಬೆಳಗುವಳು. ಸೂರ್ಯ ಮೇಲೇರಿದಂತೆ ಶಿವನ ಮಡಿಲಲ್ಲಿರುವ ಕಮಲದ ಹೂ ಬಾಯಿಬಿಡಲು ಅದರಲ್ಲಿ ಕೂಸು ಇರುವುದು ನೋಡಿ ಪಾರ್ವತಿ ಗಾಬರಿಯಾದಳು. ಕೂಸನ್ನು ಪಾರ್ವತಿ ಮಡಿಲಿಗೆ ಹಾಕಿ ಚೆನ್ನಾಗಿ ನೋಡಿಕೊ ಎಂದು ತಿಳಿಸಿ ಅದಕ್ಕೆ 'ಬಾಳಭರಮ' ಎಂದು ಹೆಸರಿಟ್ಟು ಕರೆದರು.

**ಬಾಳ ಭರಮದೇವ ಸೂರಮ್ಮದೇವಿಯರ ಮದುವೆ**

ಪಾರ್ವತಿ ಮಡಿಲಲ್ಲಿ ಬೆಳೆದ ಬಾಳಭರಮ ದೊಡ್ಡವನಾಗಿ ಮದುವೆ ವಯಸ್ಸಿಗೆ ಬಂದಾಗ ಶಿವ-ಕಾಳಿನಾಯರಾಯಣರು ಮಾತನಾಡಿಕೊಂಡು ಭೂಲೋಕಕ್ಕೆ ವಧುವಿಗಾಗಿ ಬರುವರು. ಕಾಳಿನಾರಾಯಣನ ಊರಿಗೆ ನಂದಿ ಮೇಲೆ ಬರುವಾಗ ಬಿಸಿಲು ಶಿವನಿಗೆ ಬಂದಿತೆಂದು ತನ್ನ ಬಾಲದಿಂದ ನೆರಳು ಮಾಡಿತು. ನಂದಿಯೆ ದೊಡ್ಡವನೆಂದು ಶಿವ ಇಳಿದು ನಡೆದುಕೊಂಡು ಬರುವಾಗ ಮಾತನಾಡುತ್ತ ನಂದಿ ಯಾರ ಮನೆ ಮುಂದೆ ನಿಲ್ಲುವುದೋ ಅದೇ ಮನೆಯ ಹೆಣ್ಣನ್ನು ಮದುವೆ ಮಾಡಲು ಶಿವ-ಕಾಳಿನಾರಾಯಣ ನಿರ್ಧರಿಸುವರು. ನಂದಿ ಕಾಳಿನಾರಾಯಣನ ತಂಗಿ 'ಸೂರಮ್ಮದೇವಿ'ಯನ್ನು ಕೊಟ್ಟು ಮದುವೆ ಮಾಡುತ್ತಾರೆ. ಕಾಳಿನಾರಾಯಣ ತನ್ನ ತಂಗಿ ಸುಖನಾಗಿರಲೆಂದು ಚಂದನಗಿರಿ ಕಾಣಿಕೆಯಾಗಿ ಕೊಡುವನು. ಇಲ್ಲಿಗೆ "ದೇವಲೋಕದ ಪರಿಸರದಲ್ಲಿ ಹರಿಯುತ್ತಿದ್ದ ಕಥೆ ಭೂಲೋಕಕ್ಕೆ ಹರಿದು ಬರುತ್ತದೆ."

**೨.೩ ಕಾಳಿನಾರಾಯಣ ದೇವರ ವೃತ್ತಾಂತ**

**ಪಾತಕಳಿಯಲು ನಾರ್‍ಯಾಣ ಕಾಶಿಗ ಹೋಗಬೇಕೆಂದಾರೆ**

ಹೊಸದಾಗಿ ಮದುವೆಯಾದ ಸೂರಮ್ಮದೆವಿಯನ್ನು ಅಣ್ಣನಾದ ಕಾಳಿನಾರಾಯಣನು ದೊಡ್ಡಹಬ್ಬವಾದ ಎಳ್ಳಮಾಸೆಗೆ ಕರೆತಂದನು. ಹಬ್ಬದ ನಿಮಿತ್ತ ಸೂರಮ್ಮದೇವಿ ಹೊಲದಲ್ಲಿ ಚರಗ ಚೆಲ್ಲಲು ಹೋದಳು. ಇವಳಂತೆ ಹೊಲಗಳಲ್ಲಿ ಚರಗ ಚೆಲ್ಲಲು ಹಳ್ಳಿಯ ಹೆಣ್ಣುಮಕ್ಕಳೆಲ್ಲರು ತಮ್ಮ ಅಣ್ಣಂದಿರ ಜೊತೆ ಬಂದಿದ್ದರು. ಎಲ್ಲಾ ಚರಗ ಚೆಲ್ಲಿ ಕಬ್ಬು-ಕಾಯಿಯ ಜೊತೆ ಮನೆಗೆ ಮರಳಿದರು. ಆದರೆ ಸೂರಮ್ಮದೇವಿ ತನ್ನ ಅಣ್ಣ ಬರದಿದ್ದಕ್ಕೆ ಮರುಗಿ ಕಣ್ಣೀರು ಹಾಕಿದಳು. ಮರುದಿನ ಕಾಳಿ ನಾರಾಯಣ ಪೂಜೆಗೆಂದು ಹೋದಾಗ ಗಿಡದಲ್ಲಿದ್ದ ಹೂಗಳೆಲ್ಲ

ಉದುರಿದ್ದವು. ಆದರೂ ಉದುರಿದ ಹೂಗಳನ್ನೆ ಆಯ್ದುಕೊಂಡ, ಚಿಲುಮೆಯಲ್ಲಿ ನೀರು ಬತ್ತಿಹೋಗಿದ್ದವು. ತಳದಲ್ಲಿದ್ದ ನೀರನ್ನೆ ತೆಗೆದುಕೊಂಡು ಶಿವನ ಪೂಜೆ ಮಾಡಿದ. ಶಿವನಲ್ಲಿ ನಡೆದ ಬಗ್ಗೆ ಭಕ್ತಿಯಿಂದ ಪ್ರಾರ್ಥನೆ ಮಾಡಿದ. ಆಗ ಶಿವನು ಇದಕ್ಕೆಲ್ಲ ಕಾರಣ ನಿನ್ನ ತಂಗಿ ಹಾಕಿದ ಕಣ್ಣೀರು. ಇದು ನೀನು ಮಾಡಿದ ಪಾಪವೆಂದು ತಿಳಿಸಿದ. ಪಾಪ ಪರಿಹಾರಕ್ಕಾಗಿ ಕಾಶಿಗೆ ಹೋಗಿ ಬರಬೇಕೆಂದು ತಿಳಿಸಿದ. ಕಾಶಿಗೆ ಹೋದಾಗ ತನ್ನ ಅಳಿಯನಾದ ಬಾಳಭರಮದೇವನನ್ನು ಶಿವನಿಗೆ ಪೂಜೆ ಒಪ್ಪಿಸಬೇಕೆಂದು ಶಿವನು ಸೂಚಿಸಿದನು.

**ಬಾಳಭರಮದೇವ ಶಿವನ ಪೂಜೆಗೆ ಒಪ್ಪ್ಯಾನ**

ಕಾಳಿನಾರಾಯಣನು ಚಂದನಗಿರಿಗೆ ಹೋಗಿ ತಂಗಿ ಸೂರಮ್ಮದೇವಿಯನ್ನು ಅಳಿಯ ಬಾಳಭರಮದೇವನನ್ನು ಕಂಡು ಕಾಶಿಗೆ ಹೋಗುವ ವಿಚಾರವನ್ನು ತಿಳಿಸುತ್ತಾನೆ. ತಾನಿಲ್ಲದ ಒಂಬತ್ತು ತಿಂಗಳು ಶಿವನಿಗೆ ಪೂಜೆ ಮಾಡಲು ಭರಮದೇವರಿಗೆ ಒಪ್ಪಿಸುತ್ತಾನೆ.

**ಬಾಳಭರಮ ದೇವರ ಪೂಜಿಗಿ ನಿಂತಾನೇನಯ್ಯ**

ಬಾಳಭರಮ ದೇವನು ಶಿವನ ಪೂಜೆಗೆ ನಿಂತಾಗ ಶಿವನು ಜಂಬೂದ್ವೀಪದಲ್ಲಿರುವ ಆಗ ಬಿತ್ತಿ ಆಗ ಬೆಳೆಯುವ ಹೂಬೀಜಗಳನ್ನು ಅವುಗಳ ಹೂವಿನಿಂದ ತನಗೆ ಪೂಜೆ ಮಾಡಬೇಕೆಂದು ಬಯಸುವನು. ಭರಮದೇವನು ಜಂಬೂದ್ವೀಪಕ್ಕೆ ಹೋಗಲು ಸಹಾಯಕ್ಕಾಗಿ ಮೂರು ಹರಳುಗಳನ್ನು ಕೊಡುವನು. ಮೂರು ಹರಳುಗಳ ಸಹಾಯದಿಂದ ಹಾಲಕೀಲ ಸಮುದ್ರಗಳನ್ನು ದಾಟಿ ಜಂಬೂದ್ವೀಪಕ್ಕೆ ಹೋದನು. ಅಲ್ಲಿ ಕಮಾಳದೇವಿ ಮತ್ತು ತನ್ನ ಆರು ಜನ ಸಹೋದರಿಯರು ಇದ್ದರು. ಅವರಲ್ಲಿ ತನ್ನ ಪರಿಚಯ ಹೇಳಿದ. ಆಗ ಕಮಾಳದೇವಿ ನೀನು ನನ್ನ ಮಗನೆಂದು ಸಂಭ್ರಮಪಟ್ಟಳು. ಎಲ್ಲಾರು ತಾವು ಮುಡಿವ ಆಗ ಬಿತ್ತಿ ಆಗ ಬೆಳೆಯುವ ಹೂ ಬೀಜಗಳನ್ನು ಕೊಟ್ಟರು. ಅಲ್ಲದೆ ಮಣ್ಣಿನಲ್ಲಿ ತಮ್ಮ ಮೊಲೆ ಹಾಲನ್ನು ಬೆರೆಸಿ ಹಾಲುಗುಂಬಳಗಾಯಿ ಸೃಷ್ಟಿಸಿ ಅದನ್ನು ಕಮಾಳದೇವಿ ಮಗನಿಗೆ ಕೊಟ್ಟಳು. ಬೆನ್ನಿಗೆ ಕಟ್ಟಿಕೊಂಡು ಸಮುದ್ರದಾಟೆಂದು ತಿಳಿಸಿದರು. ಅದರ ಸಹಾಯದಿಂದ ಸಮುದ್ರ ದಾಟಿ ಬೀಜಗಳಿಂದ ಬೆಳೆದ ಗಿಡದ ಹೂಗಳಿಂದ ಶಿವನಿಗೆ ಪೂಜೆ ಮಾಡಿದ. ಶಿವನು ಪ್ರಸನ್ನನಾಗಿ ಇನ್ನೂ ಮುಂದೆ ನೀನೆ ನನಗೆ ಪೂಜೆ ಮಾಡಬೇಕೆಂದು ಬೇರೆಯಾರು ಪೂಜೆ ಮಾಡಬಾರದೆಂದು ತಿಳಿಸಿದನು.

**ಕಾಳಿನಾರಾಯಣ ದೇವರು ಪೂಜಿಗಿ ಬರಬೇಕೆಂದಾಗ**

ಕಾಳಿನಾರಾಯಣ ದೇವರು ಒಂಬತ್ತು ತಿಂಗಲು ಕಾಶಿ ಯಾತ್ರೆ ಮುಗಿಸಿಕೊಂಡು ಬಂದು ಶಿವನಲ್ಲಿ ಪೂಜೆ ಮಾಡಲು ತೆರಳಿದನು. ಆದರೆ ಶಿವನ ಆಜ್ಞೆಯಂತೆ ಸೇವಕರು ಕಾಳಿನಾರಾಯಣ ದೇವರನ್ನು ಒಳಗೆ ಬಿಡಲಿಲ್ಲ. ಮೂರು ಮಾತು ತಿಳಿಸಿ ಹೋಗುವೆನೆಂದು ಕಾಳಿನಾರಾಯಣ ತಿಳಿಸಿದಾಗ ಶಿವನು ಆಜ್ಞೆಮಾಡಿದನು. ಆಗ ಶಿವನಲ್ಲಿಗೆ ಬಂದು ಮುಂಜಾನೆ ಎದ್ದು ಒಣಗಿಡ, ಬಂಜೆ ಮುಖನೋಡಬಾರದೆಂದು ತಿಳಿಸಿದಾಗ ಶಿವನು ಇದನ್ನು ಸೂಕ್ಷ್ಮವಾಗಿ ಗಮನಿಸಿ ಬಾಳಭರಮದೇವರು ಪೂಜೆಗೆ ಬೇಡೆ ಕಾಳಿನಾರಾಯಣನೇ ನನಗೆ ಪೂಜೆ ಮಾಡಲೆಂದು ಶಿವ ತಿಳಿಸಿದ. ಬಾಳ ಭರಮದೇವನು ಎತ್ತುಗಳಿಗೆ ಪೂಜೆ ಮಾಡಿದ. ಅದೇ ಮುಂದೆ 'ಕಾರಹುಣ್ಣಿಮೆ'ಯಾಯಿತು. ಮನೆಗೆ ಹೋಗಿ ಮುನಿದುಕೊಂಡು ಮಲಗಿದ.

**೨.೪ ಬೀರಪ್ಪನ ಜನನ ವೃತ್ತಾಂತ**

**ಬಂಜೆ ನೀಗಬೇಕು ಅಂದಾಳೆ ಜಗದಾಗ ಇರಬೇಕು ಅಂದಾಳೆ**

ಕಾಳಿನಾರಾಯಣನು ಭರಮದೇವನನ್ನು 'ಬಂಜಿ' ಎಂದು ಅವಮಾನಮಾಡಿದ್ದಕ್ಕಾಗಿ ಭರಮದೇವ ಮುಸುಗಿಕೊಂಡು ಮಲಗಿದ್ದನ್ನು ಸೂರಮ್ಮದೇವಿ ಗಮನಿಸಿದಳು. ಎಲ್ಲಾ ವಿಚಾರ ತಿಳಿದುಕೊಂಡು ಶಿವನಲ್ಲಿಗೆ ಹೋಗಿ ವ್ರತಮಾಡಬೇಕೆಂದು ನಿರ್ಧರಿಸಿ ಹಾಗೆ ಮಾಡಿದಳು. ಆದರೆ ಶಿವನು ನಿನಗೆ ಮಕ್ಕಳ ಫಲವಿಲ್ಲವೆಂದು

ತಿಳಿಸಿದಾಗ ಬಿಡದೆ ಹಟಮಾಡಿ ವ್ರತಮಾಡಿದಳು. ಶಿವನ ಆಕೆಯ ಭಕ್ತಿಗೆ ಮಣಿದು ತನ್ನ ಬೆವರನ್ನೆ ಬಟ್ಟಲಲ್ಲಿ ತುಂಬಿ ಕೊಡುತ್ತಾನೆ. ಇದನ್ನು ಗಂಡ-ಹೆಂಡತಿ ಇಬ್ಬರು ಸೇವಿಸಬೇಕೆಂದು ತಿಳಿಸುತ್ತ ಹುಟ್ಟಿದ ಮಗುವನ್ನು ೧೩ ದಿನದ ಬಳಿಕ ಅಡವಿಗೆ ಕಳುಹಿಸಬೇಕೆಂದು ತಿಳಿಸುವನು. ಈ ಮಾತುಗಳನ್ನು ಒಪ್ಪಿ ಮನೆಗೆ ಬಂದು ಪ್ರಸಾದವನ್ನು ಗಂಡ-ಹೆಂಡಿರಿಬ್ಬರು ಸೇವಿಸುವರು. ಇದರಿಂದ ಆಕೆ ಗರ್ಭಧರಿಸುವಳು.

### ತವರಮನಿಯ ಬಾನದ ಬುತ್ತಿ ಬೇಡಿ ಬಗಸೇನಂದಾಳ

ಸೂರಮ್ಮದೇವಿ ಬಸುರಿಯಾದ ವಿಷಯ ಅಣ್ಣ ಕಾಳಿನಾರಾಯಣನಿಗೆ ತಿಳಿಸಬೇಕೆಂದು ಚಂದನಗಿರಿಗೆ ಬಂದಿದ್ದ ಬಳೆಗಾರ ಬಾಬಣ್ಣನಿಗೆ ತಿಳಿಸುವಳು. ತವರು ಮನೆಯ ಬಾನದ ಬುತ್ತಿ ಬಯಸಿರುವುದಾಗಿ ಹೇಳುವಳು. ಬಳೆಗಾರ ಬಾಬಣ್ಣನಿಂದ ತಂಗಿ ಬಸುರಿಯಾದ ವಿಷಯ ತಿಳಿದು ಕಾಳಿನಾರಾಯಣ ದೇವರು ಗಾಬರಿಯಾಗಿ, ತಂಗಿಗೆ ಹೆಣ್ಣು ಹುಟ್ಟಿದರೂ ಗಂಡುಹುಟ್ಟಿದರೂ ತನಗೆ ಕೇಡೆಂದು ಬಯಸಿ ಅವನೆ ಸ್ವತಃ ವಿಷದ ಬುತ್ತಿ, ಸೀರೆ, ಕುಪ್ಪಸಗಳೊಂದಿಗೆ ತೆರಳುವನು.

ಸೂರಮ್ಮದೇವಿ ಅದೇ ವೇಳೆಯಲ್ಲಿ ಕನಸೊಂದು ಕಾಣುವಳು. ಅದರಲ್ಲಿ ಗರ್ಭದ ಕೂಸು ಮಾತನಾಡಿದಂತೆ ಭಾಸವಾಗುತ್ತದೆ. ಅದು ನಿಮ್ಮಣ್ಣ ತರುವ ಬುತ್ತಿ ಅದನ್ನು ಮೊದಲು ನಾಯಿಗೆ ಹಾಕು, ಸೀರೆ, ಕುಪ್ಪಸ, ಭಂಡಾರ, ಕುಂಕುಮ ಎಲ್ಲಾ ಕಟ್ಟಿಗೆ ಕುದುರೆಗೆ ಹಾಕು. ಆಗ ನೋಡು ಎಂದು ತಿಳಿಸಿದಾಗ ಸೂರಮ್ಮದೇವಿ ಗಾಬರಿಯಾಗಿ ಎದ್ದು ಅದರ ಅರ್ಥ ಕೇಳಿ ಪಡೆಯುವಳು.

ತನ್ನ ಅಣ್ಣ ಮನೆಗೆ ಬಂದಾಗ ಆತನು ಕೊಡುವ ಬುತ್ತಿಯನ್ನು ನಾಯಿ, ಬೆಕ್ಕುಗಳಿಗೆ ಹಾಕುವಳು. ಅವು ಸಾಯುವವು. ಅವುಗಳ ಹೊಟ್ಟೆಯಲ್ಲಿದ್ದ ಮರಿಗಳು ಹೊರೆಗೆಬರುವವು. ಸೀರೆ, ಕುಪ್ಪಸ, ಕುಂಕುಮ ಎಲ್ಲಾ ಕಟ್ಟಿಗೆ ಕುದುರೆಗೆ ಹಾಕಿದಾಗ ಅದಕ್ಕೆ ಬೆಂಕಿ ಹತ್ತಿ ಉರಿಯುತ್ತದೆ. ನೊಂದು ಸೂರಮ್ಮದೇವಿ ತನ್ನ ತಾಯಿಯಿಂದೆ ತನ್ನ ತವರು ಹೋಯಿತೆಂದು ಪ್ರಲಾಪಿಸುತ್ತಾಳೆ.

### ಕಾಳಿನಾರಾಯಣ ಎಮ್ಮೆಗಳು ವಿಷದ ಬುತ್ತಿ ತಿಂದಾವ

ಸೂರಮ್ಮದೇವಿ ಅಣ್ಣನ ಬುತ್ತಿಯನ್ನು ಮನೆಯ ಹಿತ್ತಲಲ್ಲಿ ಚೆಲ್ಲುವಳು. ಗುರು ರೇವಣಸಿದ್ದನು ಪಟ್ಟಣಕ್ಕೆ ಹೋಗಿ ಕಾಳಿನಾರಾಯಣನ ಎಮ್ಮೆಗಳನ್ನು ಹೊಡೆದುಕೊಂಡು ಬಂದು ಊರ ಹೊರಗೆ ನಿಲ್ಲಿಸಿ ವಿಷದ ಬುತ್ತಿಯನ್ನು ತಂದು ಎಮ್ಮೆಗಳಿಗೆ ಹಾಕುವನು. ತಂಗಿಯ ಮನೆಯಲ್ಲಿದ್ದ ಭರಮದೇವನ ಮಾವನಾದ ಕಾಳಿನಾರಾಯಣ ಮುಂಜಾನೆ ಬಹಿರ್ದೆಶೆಗೆ ಹೋಗುವಾಗ ಕಾಗೆಹದ್ದುಗಳು ಹಾರುವುದನ್ನು ಕಂಡು ಹೋಗಿ ನೋಡಿದಾಗ ತನ್ನ ಎಮ್ಮೆಗಳು ಸತ್ತಿರುವುದನ್ನು ನೋಡಿ ಗಾಬರಿಯಾಗಿ ಮನೆಗೆ ಬಂದು ತಾನು ಹೋಗುವುದನ್ನು ತಂಗಿಗೆ ತಿಳಿಸುವನು. ತಂಗಿ ನನಗೆ ಸೂಲಗಿತ್ತಿಯರು ಬೇಕೆಂದು ಕೇಳಿದಾಗ ತನ್ನ ಮನೆಯಿಂದಲೆ ಕಳುಹಿಸಿಕೊಡುವುದಾಗಿ ಅಣ್ಣ ಹೇಳಿ ಹೊರಡುವನು. ನಂತರ ಸೂರಮ್ಮದೇವಿ ಅಡುಗೆ ಮಾಡಿ ಅದು ತವರ ಬುತ್ತಿ ಎಂದು ಊರಲ್ಲೆಲ್ಲ ಬೀರುತ್ತಾಳೆ.

### ಲಿಂಗಬೀರಣ್ಣನು ದೇವರು ಬಯಲಿಗ ಜಿಗಿದು ನಿಂತಾನ

ಸೂಲಗಿತ್ತಿಯರು ಬಾಣಂತನಕ್ಕೆ ನಿಲ್ಲುವರು. ನೆರೆದ ಹೆಂಗಸರನ್ನೆಲ್ಲ ಹೊರಗೆ ಕಳುಹಿಸಿ ಅವರು ಸೂರಮ್ಮ ದೇವಿಯ ಕಣ್ಣು, ಕೈ ಎಲ್ಲಾ ಕಟ್ಟುವರು. ಹುಟ್ಟುವ ಕೂಸನ್ನು ಸಾಯಿಸಲು ನಿರ್ಧರಿಸುವರು. ಇದನ್ನರಿತ ಕೂಸು ಗರ್ಭದಿಂದ ಹೊರಹಾರಿ ನಿಂತಿತು. ಸೂಲಗಿತ್ತಿಯರ ಕಣ್ಣಿಗೆ ಕೋಲ್ಮಿಂಚು ಹೊಡೆದಂತೆ ಆಯಿತು. ಎಲ್ಲಾರಿಗೆ ಎದೆಗೆ ಹೊಡೆದಂತಾಯಿತು. ಎಲ್ಲಾರು ಗಾಬರಿಯಾಗಿ ಓಡುವರು. ಆಗ ಬಾಲಬೀರಣ್ಣನು ಕೂಸಾಗಿ ತಾಯಿಯ ಮಗ್ಗುಲಲ್ಲಿ ಮಲಗುತ್ತದೆ. ವಿಷಯ ತಿಳಿದ ಬಾಳಭರಮ ಹೆಂಡತಿಯ ಕಟ್ಟುಗಳೆಲ್ಲ ಬಿಚ್ಚಿ ಹೊಳೆಯುವ ಕೂಸು ನೋಡಿ ಆನಂದ ಪಡೆಯುತ್ತಾರೆ. ನೆರೆಹೊರೆಯವರು ಬಂದು ಬಾಣಂತಿ, ಕೂಸಿನ ಉಪಚಾರಕ್ಕೆ ನಿಲ್ಲುತ್ತಾರೆ.

### ಕಾಳಿನಾರಾಯಣ ದೇವರ ಕಣ್ಣಿಗ ನೀರು ತಂದಾನ

ಬೀರಪ್ಪನಿಂದ ಒದೆ ತಿಂದ ಸೂಲಗಿತ್ತಿಯರು ರಾತ್ರೋರಾತ್ರಿ ನಗರ ಪಟ್ಟಣಕ್ಕೆ ಬರುತ್ತಾರೆ. ರಾತ್ರಿಯಾದ್ದರಿಂದ ಅವರನ್ನು ಪೋಲೀಸರು ಕಳ್ಳರೆಂದು ಭಾವಿಸಿ ಬಂಧಿಸುತ್ತಾರೆ. ಬೆಳಿಗ್ಗೆ ನೋಡಿದಾಗ ಪೋಲಿಸರು ಬಂಧಿಸಿದವರನ್ನು ಕಾಳಿನಾರಾಯಣನಿಗೆ ಒಪ್ಪಿಸುವರು. ಇವರು ನಾನು ಕಳುಹಿಸಿದ ಸೂಲಗಿತ್ತಿಯರೆಂದು ವಿಚಾರಿಸಿದಾಗ ಎಲ್ಲಾ ವಿಚಾರ ತಿಳಿದುಕೊಂಡು ಎಲ್ಲಾ ದೈವಲೀಲೆಯೆಂದು ಭವಿಸುತ್ತಾನೆ. ಅವನ ಕಣ್ಣುಗಳಲ್ಲಿ ನೀರು ತುಂಬಿ ಬರುತ್ತವೆ.

### ಖಾಸ ಸೋದರ ಮಾವನ ಕಪಟರೂಪ ತೊಟ್ಟಾನ

ಎಲ್ಲಾ ವಿಚಾರ ತಿಳಿದು, ಏನಾದರೂ ಮಾಡಿ ಕೂಸನ್ನು ಕೊಲ್ಲಬೇಕೆಂದು ಕಾಳಿನಾರಾಯಣನು ತಾನೇ ಚಂದನಗಿರಿಗೆ ಬರುವನು. ಅಲ್ಲಿ ವೇಷ ಬದಲಿಸಿ ಗೋಸಿಗನಾಗಿ ಕಣಿ ಹೇಳುವನು. ಕೂಸಿನ ಭವಿಷ್ಯ ಚೆನ್ನಾಗಿಲ್ಲವೆಂದು ತಿಳಿಸಿ ಇದರಿಂದ ತಾಯಿ-ತಂದೆ, ಮಾವನವರಿಗೆ ಕೇಡೆಂದು ತಿಳಿಸುವನು. ಆಗ ಸೂರಮ್ಮ ದೇವಿ ನನ್ನಗೂ ಒಳ್ಳೆಯ ಭವಿಷ್ಯಗಾರ ಗೊತ್ತಿರುವನೇನು ಆತನಲ್ಲಿ ತಿಳಿದುಕೊಳ್ಳುವೆ ಎಂದಾಗ ಮಾರುವೇಷದಲ್ಲಿದ್ದ ಕಾಳಿನಾರಾಯಣ ಅಲ್ಲಿಂದ ಹೊರಡುವನು.

### ಕೂದಲಿಗೆ ನಂದನವನದಾಗ ಕೂಸಿನ ತೊಟ್ಟಿಲ ಕಟ್ಯಾರ

ಮಾರುವೇಷದಲ್ಲಿದ್ದ ಕಾಳಿನಾರಾಯಣ ಮನೆಗೆ ಹೋಗಿ ಎಲ್ಲಾ ವೇಷ ತೆಗೆದು ಮತ್ತೆ ತಂಗಿ ಮನೆಗೆ ಬಂದು ಮಗುವಿನ ಭವಿಷ್ಯ ಚೆನ್ನಾಗಿಲ್ಲ. ತಂದೆತಾಯಿ ಎಲ್ಲಾರಿಗೂ ಕೇಡೆಂದು ತಿಳಿಸುವನು. ಅದಕ್ಕಾಗಿ ಅದನ್ನು ಅಡವಿಗೆ ಬಿಡಲು ಹೇಳುವನು. ಇದನ್ನು ನಂಬಿದ ತಂಗಿ ಅಡವಿಗೆ ಯಾರು ಬಿಡುವರೆಂದು ಕೇಳಿದಾಗ ನಾಲ್ಕು ಬಲಶಾಲಿಗಳನ್ನು ತಾನೇ ಕಳುಹಿಸುವನು. ತೊಟ್ಟಿಲನ್ನು ಬಲಶಾಲಿಗಳು ಹೊತ್ತಲು ಹೋದರೆ ಅದು ಅಲುಗಾಡಲಿಲ್ಲ. ನೀರಿಗೆ ಹೋದ ತಂಗಿ ಬಂದು ಕೂಸಿನ ತೊಟ್ಟಿಲನ್ನು ಮುಟ್ಟಿ ಕೂಸಿಗೆ ಹಾಲುಕುಡಿಸಿ ಮಲಗಿಸಿದಾಗ ತೊಟ್ಟಿಲು ಅಂತರಕ್ಕೆ ಹಾರಿತು. ನಾಲ್ಕು ಜನ ಬಲಶಾಲಿಗಳಿಗೆ ಅದರ ಪರಿವೇ ಅರ್ಥವಾಗಲಿಲ್ಲ. ತೊಟ್ಟಿಲನ್ನು ಕೂದಲಿನ ನಂದನವನಕ್ಕೆ ಸಾಗಿಸಿ ಅಲ್ಲಿಂದ ಬರುವಾಗ ಕೂಸಿನ ರುಂಡ ತರಬೇಕೆಂದು ಕಾಳಿನಾರಾಯಣ ಆಜ್ಞಾಪಿಸಿದ. ಬಲಶಾಲಿಗಳು ಅಲ್ಲಿಗೆ ಹೋಗುವಷ್ಟರಲ್ಲಿ ಹಸಿದಿದ್ದರು. ತೊಟ್ಟಿಲಿನಲ್ಲಿದ್ದ ಊಟ ಮಾಡಿದರು. ಎಷ್ಟು ಮಾಡಿದರೂ ಅದು ಹಾಗೆ ಇತ್ತು. ಎಷ್ಟು ನೀರು ಕುಡಿದರೂ ನೀರು ಹಾಗೆ ಇದ್ದವು. ಬಲಶಾಲಿಗಳಿಗೆ ಆಶ್ಚರ್ಯವಾಯಿತು. ಮಗುವಿನ ಋಣ ನಮ್ಮ ಮೇಲಿದೆ, ಮಗುವನ್ನು ಸಾಯಿಸಬಾರದೆಂದು ನಿರ್ಧಾರಮಾಡಿ ಅದನ್ನು ಮರದ ಮೇಲೆ ಕಟ್ಟಿದರು. ಬಿಸಲಿಗೆ ತಾನೇ ಸಾಯುತ್ತದೆಂದು, ಬೇರೆ ಗಿಡದ ರಕ್ತಪಿಪಾಸುವಿನಿಂದ ರುಂಡ ತಂದು ಕಾಳಿನಾರಾಯಣನಿಗೆ ತೋರಿಸಿದಾಗ ಸಂಭ್ರಮಪಟ್ಟನು.

### ಮುಕ್ಕಣ್ಣ ಶಿವರಾಯನ ಕೂಸಿನ ಕಾವಲ ಇಟ್ಟಾನ

ಕೂಸಿನ ಅಳುವ ಧ್ವನಿ ಕೇಳಿದ ಶಿವಪಾರ್ವತಿಯರು ಬಂದು ನೋಡಿದಾಗ ಮಗುವಿನರೂಪ ನೋಡಿ ಪಾರ್ವತಿ ಬೆವರುತ್ತಾಳೆ. ಅದರ ಬೆವರಿನಿಂದ ಹುಳಗಳು ತಯಾರಾದವು. ಅವು ಜೇನುಹುಳಗಳು. ನಾಗ ಬಂದು ನೆರಳು ಮಾಡುತ್ತಾನೆ. ಗಿಡ ಹಸಿರಾಗುತ್ತದೆ. ಹೀಗೆ ಮಗುವಿಗೆ ರಕ್ಷಣೆಮಾಡಿ ಶಿವಪಾರ್ವತಿಯರು ಹಿಂದಿರುಗುವರು.

## ೨.೫ ಅಕ್ಕವ್ವ ಮಾಯವ್ವರ ವೃತ್ತಾಂತ

### ಕೆಟ್ಟ ಶಕುನ ಹೊಂಟಾವೆ ಮಾಯವ್ವನ ತೆಪ್ಪಬಿಟ್ಯಾರ

ದೇವಗಿರಿಯ ಅರಸ ಗೌಡ ದೇವಿಂದ್ರರಾಯ, ಮಡದಿ ಸುಭದ್ರಿ ಅವರಿಗೆ ಆರುಜನ ಹೆಣ್ಣುಮಕ್ಕಳು. ಮತ್ತೆ ಏಳನೆಯಾಕೆ ಮಾಯವ್ವ, ಇವಳ ಪಂಚಾಂಗ ವಿಚಾರ ಮಾಡಲು ಇದರಿಂದ ಕೇಡೆಂದು ತಿಳಿದು ಹುಟ್ಟಿದ ಹನ್ನೊಂದನೆ ದಿನಕ್ಕೆ ಮಗುವನ್ನು ಬಂಗಾರದ ಪೆಟ್ಟಿಗೆಯಲ್ಲಿ ಹಾಕಿ ನೀರಿನಲ್ಲಿ ತೇಲಿಬಿಡುವರು. ಇದನ್ನು ಸಾಧುಗಳು

ನೋಡಿ ತೆಗೆದುಕೊಂಡು ದಿಬ್ಬಿಯ ದಿಬ್ಬರಾಯನಿಗೆ ಕೊಡುವರು. ಅವನ ಏಳುನೂರು ಕುರಿ ಬಂಜೆಯಾಗಿದ್ದವು. ಈಗ ಅವುಗಳ ಕಳೆಯೆ ಬೇರೆಯಾಯಿತು. ಇದನ್ನು ಗಮನಿಸಿದ ದಿಬ್ಬ-ದಿಬ್ಬಿಯ ಹೆಂಡತಿ ಸಂಭ್ರಮದಿಂದ ಮಾಯವ್ವನೆಂದು ಹೆಸರಿಟ್ಟರು.

**ಬಾಗಿನಾಡದ ಬಣ್ಣದ ಮಾಯವ್ವ ದೊಡ್ಡರೆನಾಗುತಾಳೇನ**

ದಿಬ್ಬಿಯ ಸಾಕುಮಗನಾದ ಮಾಯವ್ವ ದೊಡ್ಡಾಕಿಯಾಗಿ ಏಳುನೂರು ಕುರಿಗಳನ್ನು ನಾನೇ ಕಾಯುವೆ ಎಂದು ತಾನೇ ಕಾಯಲು ಹಟಹಿಡಿದಳು. 'ಕಾಡುರುದ್ದರ ಭೂಮ್ಯಾಗ ಅಕ್ಕವ್ವ ಮಾಯವ್ವ ಕೂಡ್ಯಾರ.'

ಮಾಯವ್ವಳು ಕುರಿಕಾಯುತ್ತಾ ಕಾಡುರುದ್ದರ ಭೂಮಿಗೆ ಬಂದಾಗ ಅವಳ ಕಾಲಿನಲ್ಲಿ ಬಲಗಾಲ ಹೆಜ್ಜೆಯಲ್ಲಿ ಕುಂಕುಮ ಮತ್ತೊಂದು ಪಾದದಲ್ಲಿ ಭಂಡಾರದ್ದಾದ ಹೆಜ್ಜೆ ಬೀಳುವವು. ಕೈಲಾಸದಿಂದ ಆರುಜನ ಅಣ್ಣಂದಿರು ತಂಗಿ ಶೋಧ ಮಾಡುತ್ತಾ ಬರುವರು. ಹೆಜ್ಜೆ ಗುರ್ತು ನೋಡಿ ದೊಡ್ಡಾಕೆ ಅಕ್ಕವ್ವಾ ತಂಗಿಯತ್ತ ಇರುವುದಾಗಿ ತಿಳಿಸಿದಾಗ ಉಳಿದ ಐದು ಜನ ಕೈಲಾಸಕ್ಕೆ ಹೋಗುವರು. ಅವರು ದಿಬ್ಬಿಯ ಹತ್ತಿರ ಬಂದು ಎಲ್ಲಾ ವೃತ್ತಾಂತ ತಿಳಿಸಿದಾಗ ಇಬ್ಬರಿಗೂ ಕುರಿಗಳನ್ನು ಕೊಟ್ಟು ಚಂದ್ರಗಿರಿಯಲ್ಲಿ ವಾಸವಾಗಿರಲು ತಿಳಿಸುವನು. ಅವರು ಅಲ್ಲೇ ಸಂಸಾರ ಮಾಡಲು ನಿರ್ಧರಿಸುವರು.

**ಕಂಚಿನಾಲದ ಮರಾದಗ ತೊಟ್ಟಿಲು ನೋಡುತಾರೇನ**

ಅಕ್ಕ-ತಂಗಿಯರಿಬ್ಬರು ಕುರಿಕಾಯುತ್ತ ಕಂಚಿನಾಲದಮರದ ಕೆಳಗೆ ಊಟಮಾಡುತ್ತ ಕುಳಿತಾಗ ಮಗುವಿನ ಅಳುವ ಧ್ವನಿ ಕೇಳಿಸಿತು. ಅಕ್ಕ ನೋಡಿ ತರುವೆನೆಂದಾಗ ಇರುವೆ ದಾರಿ ಬಿಡುವುದಿಲ್ಲ. ತಂಗಿ ಮಾಯವ್ವ ಮಗುವನ್ನು ತರುವಾಗ ಇರುವೆ, ಹಾವು, ಗಿಳಿ, ತಡೆಯಾಡಿದರು ಅವುಗಳಿಗೆ ಪೂಜೆಯ ಮರ್ಯಾದೆ ಮಾಡಿದ್ದಕ್ಕೆ ದಾರಿ ಬಿಡುವುವು. ಇರುವಗೆ ಸಕ್ಕರೆ, ಹಾವಿಗೆ ಮನೆಯಮುಂದೆ ತನ್ನ ರೂಪ, ಗಿಳಿಗೆ ತೊಟಿಲನ್ನು ನೀಡುವುದಾಗಿ ಮಾಯವ್ವ ತಿಳಿಸುವಳು.

**ಚೆನ್ನಿಗ ತಮ್ಮ ಬೀರಣ್ಣನ ಮಾಯಮ್ಮನುಡಿಯಾಗ ಹೊತ್ತಾಳ**

ಅಕ್ಕ-ತಂಗಿಯರು ಇಬ್ಬರು ಕೂಸು ನಮಗೆ ಬೇಕೆಂದು ಹಟಮಾಡಿದರು, ಜಗಳವಾಡಿದರು. ಆಗ ಎಳ್ಳಿಗುಂಪಿ ರಾಯಣ್ಣಾ ಬಂದು ಎಲ್ಲಾ ವಿವಾದವನ್ನು ಆಲಿಸಿ ತೊಟ್ಟಿಲು ಮೂರು ಸುತ್ತುಹಾಕಿ ಎಡಬದಿ ಮೊಲೆ ಚಿಗುರಿ ಹಾಲು ಚಿಮ್ಮುವವೋ ಅವರು ಕೂಸು ತೆಗೆದುಕೊಳ್ಳಿ ಎಂದಾಗ ಅಕ್ಕವ್ವಾಗೆ ಹಾಗೆ ಹಾಗುವುದಿಲ್ಲ. ಆದರೆ ಮಾಯವ್ವಳಿಗೆ ಬಾಣಂತಿ ಕಳೆ ಬರುತ್ತದೆ. ಅವಳ ಮೊಲೆಯಲ್ಲಿ ಹಾಲು ಚಿಮ್ಮುವವು. ಆಗ ಎಳ್ಳಿಗುಂಪಿ ರಾಯಣ್ಣಾ ಮಾಯವ್ವಗೆ ತಮ್ಮನನ್ನಾಗಿ ಮಾಡಿ ಕೂಸು ನೀಡುವನು.

**೨.೬ ಬಾಲಬೀರಣ್ಣನ ಲೀಲಾ ವೃತ್ತಾಂತ**

**ಚೆನ್ನಿಂಗ ತಮ್ಮ ಬೀರಣ್ಣ ಮಯದಾಟ ಆಡ್ಯಾನ**

ಚಂದನಗಿರಿಯಲ್ಲಿ ಮಾಯಮ್ಮನ ಸಂರಕ್ಷಣೆಯಲ್ಲಿ ಬೀರಣ್ಣ ಬೆಳೆಯುತ್ತಾನೆ. ಅಂಬೆಗಾಲು, ನಂತರ ನಡೆದು ಆಡುವುದು ಕಲಿಯುತ್ತಾನೆ. ಅಕ್ಕಮಲಗಿದ್ದಾಗ ತಾನೊಬ್ಬನೆ ಹೊರಗೆಹೋಗಿ ಚಿಣಿದಾಂಡು ಆಟವಾಡಿ ಬರುವನು. ಅಕ್ಕ ತಮ್ಮನಿಗಾಗಿ ಚಿಣಿದಾಂಡು ಮಾಡಿಸಿಕೊಡುವಳು. ಊರಿನವರೆಲ್ಲ ಒಂದು ಕಡೆ ತಾನೊಬ್ಬನೇ ಒಂದುಕಡೆ ಆಡಿ ಗೆಲ್ಲುತ್ತಾನೆ. ನಂತರ ಚೆಂಡಿನಾಟ, ಚೆಂಡು ಮಾಡಿಸಲು ಬಡಿಗೇರಕಾಳಣ್ಣ ತಾನುತನ್ನ ಹುಟ್ಟು ಮಾರ್ಗದಲ್ಲಿ ತಯಾರು ಮಾಡಿದರು. ಅದರಲ್ಲೂ ಬೀರಣ್ಣನೇ ಗೆಲ್ಲುತ್ತಾನೆ. ಶೆಟ್ಟಿ ಸಾಹುಕಾರನ ಮಗ ಬೀರಣ್ಣನ ಹತ್ತಿರ ಸವಾಲಾಕಿ ಸಾಯುತ್ತಾನೆ. ಇದರಿಂದ ಅಕ್ಕ-ತಮ್ಮ ಚಂದನಗಿರಿ ಬಿಟ್ಟು ಬೆಳ್ಳಿಗಿರಿಗೆ ಹೋಗುತ್ತಾರೆ.

**ಕೈಯ್ಯಲಾಸದಿಂದೇನ ಬಿಲ್ಲು ಬಾಣ ಬಂದಾವ**

ಬೆಳ್ಳಿಗಿರಿಯಲ್ಲಿ ವಾಸವಾಗಿದ್ದಾಗ ಒಮ್ಮೆ ಬೀರಣ್ಣನು ಬಿಲ್ಲಿನಾಟವಾಡಲು ನಿರ್ಧರಿಸಿ ಹೋಗುವನು. ಬಿಲ್ಲಿನಾಟವಾಡುವಾಗ ಬಿಲ್ಲು ಮುರಿಯುತ್ತದೆ. ನಾಳೆ ಮತ್ತೊಂದು ಹೊಸಬಿಲ್ಲು ತರಿಸುವುದಾಗಿ ಹೇಳಿ ಮನೆಗೆ ಹೋಗಿ ಅಕ್ಕನನ್ನು ಬಿಲ್ಲು ಬೇಕೇಬೇಕೆಂದು ಹಟಮಾಡುವನು. ಅಕ್ಕ ಬಿಲ್ಲು ಮಾಡಿ ಕೊಡುವಾಗ ಅವನ್ನು ಮುರಿದು ಹಾಕಿ ಬೇಡವೆಂದು ಕುಳಿತುಕೊಳ್ಳುವನು. ಆಗ ಜಕಣಿಯರು ಬಂದು ವಿಷಯ ತಿಳಿದುಕೊಂಡು ಶಿವನಿಂದ ಬಿಲ್ಲು ಬಾಣ ಪಡೆದುಕೊಂಡು ಬಂದು ನೀಡುವರು.

**ರಾಮರ ಮಿಕವನಲ್ಲೇಳ ಬೀರಣ್ಣ ಬ್ಯಾಟಿ ಆಡ್ಯಾನ**

ಶಿವನ ಬಿಲ್ಲುಬಾಣಗಳಿಂದ ಬೀರಪ್ಪ ಎಲ್ಲಾ ದಿಕ್ಕುಗಳಿಂದಲೂ ಬ್ಯಾಟಿ ಆಡುತ್ತಾನೆ. ಉತ್ತರ ದಿಕ್ಕಿನಲ್ಲಿ ನಾರಾಯಣನ ಅಡವಿಯಲ್ಲಿ ರಾಮರ ಮಿಕ ಕಾಣುತ್ತದೆ. ಅದಕ್ಕೆ ಬಾಣ ಹೊಡೆದಾಗ ಅದು ಬೀರಣ್ಣನ ಪಾದದ ಮೇಲೆ ಬಂದು ಬೀಳುತ್ತದೆ. ನೀವು ನನ್ನ ತಲೆ ಮೇಲೆ ನಿಮ್ಮ ಪಾದ ಇಟ್ಟಾಗ ನಾನು ಜೀವಸಮರ್ಪಣೆ ಮಾಡುವೆ ಎಂದಾಗ ಬೀರಣ್ಣ ಹಾಗೆ ಮಾಡುವನು. ಈ ವಿಷಯ ಅಕ್ಕನಿಗೆ ತಿಳಿಸಿದಾಗ ತಮ್ಮನಿಗೆ ಪಾಪ ಒದಗುವುದೆಂದು ತಿಳಿದು ಮೀಸಲು ತುಪ್ಪ ತೆಗೆದಿಟ್ಟು ಸಿದ್ದರ ಊಟಕ್ಕೆ ಕರೆಯಲು ಮಾಯವ್ವ ಬಯಸುತ್ತಾಳೆ.

**ತಾಯಿಯಿಲ್ಲದವನೇನ ತಂದಿ ಕಾಣದವನೇನ**

ಬೀರಣ್ಣ ಬಾವಿಯ ದಂಡೆಯಲ್ಲಿ ಕುಳಿತಿದ್ದಾಗ ಬಾವಿಗೆ ಬಂದ ನಾರಿಯರ ಕೊಡಗಳಿಗೆ ಬಾಣ ಹೊಡೆಯುವನು. ಎಲ್ಲರ ಕೊಡಗಳು ತೂತುಬೀಳುವವು. ಬಾಲೆಯರು ತಂದೆ-ತಾಯಿ ಇಲ್ಲದವ ಎಂದು ಬೈದರು. ಬೀರಣ್ಣ ಅವರ ಕೊಡಗಳಿಗೆ ಮೇಣ ಹಚ್ಚಿದ. ಎಲ್ಲಾರು ಮಾಯವ್ವನ ಹತ್ತಿರ ಬಂದು ಬೀರಣ್ಣನಿಗೆ ನಾರಿಯ ತರಬೇಕೆಂದು ತಿಳಿಸಿದರು. ಆದರೆ ಬೀರಣ್ಣನ ಮನಸ್ಸಿನಲ್ಲಿ ತುಂಬಾ ಘಾಸಿಯಾಗಿತ್ತು. ಮಾಯವ್ವ ಅವರನ್ನೆಲ್ಲ ಜಮಾಯಿಸಿ ಕಳುಹಿಸಿದಳು.

**೨.೭ ಲಿಂಗಬೀರಣ್ಣನ ಮದುವೆ ವೃತ್ತಾಂತ**

**ತಾಯಿಯ ಗುರುತ ಹೇಳವ್ವ ತಂದೆ ಗುರುತ ಹೇಳವ್ವ**

ಮಾಯವ್ವಳು ತನ್ನ ತಮ್ಮನಿಗೆ ಮದುವೆ ಮಾಡಲು ನಿರ್ಧರಿಸಿದಳು. ಬೀರಣ್ಣನು ತನ್ನ ಅಕ್ಕನಿಗೆ ಪ್ರಪಂಚದ ಎಲ್ಲಾ ಹೆಣ್ಣುಗಳು ನಿನ್ನ ರೂಪದಲ್ಲಿ ಕಾಣುವವು. ನಾನು ನನ್ನ ಸೋದರಮಾವನ ಮಗಳನ್ನು ಮದುವೆಯಾಗುವೆ. ನನಗೆ ನನ್ನ ತಂದೆಯ, ತಾಯಿಯ ಗುರುತು ತಿಳಿಸೆಂದಾಗ ಮಾಯವ್ವ ನಾವು ಭೇಟಿಯಾದುದೆ ಕೊದಲಿಗಿ ಬನದಲ್ಲಿ. ನನಗೆ ಅವರ ಗುರುತು ಹೇಗೆ ತಿಳಿಸಲಿ ಎಂದು ಕೇಳವಳು. ರಾತ್ರಿ ಮಲಗಿದ್ದಾಗ ಮಾಯವ್ವಳಿಗೆ ಕನಸೊಂದು ಬೀಳುವುದು. ಅಲ್ಲಿ ಗುರು ರೇವಣಸಿದ್ದನು ಅಕ್ಕ-ತಮ್ಮರ ಸಂಬಂಧವನ್ನು, ನಗರ ಪಟ್ಟಣದ ಕಾಳಿನಾರಾಯಣನ ಮಗಳು ಬೀರಣ್ಣನ ಸೊಸೆಯೆಂದು ತಿಳಿಸುವನು. ಇದನ್ನು ಬೀರಣ್ಣನ ಮುಂದೆ ತಿಳಿಸಿದಾಗ ಬೀರಣ್ಣ ಸೊಸೆಯನ್ನು ಕಾಣಲು ಮುಂದಾಗುವನು.

**ಬೀರರ ಸಂಗವ್ವನ ಮನಿಯಾಗ ಲಿಂಗ ಬೀರಣ್ಣದೇವರ**

ಬೀರಣ್ಣನು ಸೊಸೆಯನ್ನು ಕಾಣಲು ನಗರಿಪಟ್ಟಣಕ್ಕೆ ಬಂದು ಮುದುಕನ ವೇಷಧರಿಸಿ ಅಲ್ಲಿ ಮಕ್ಕಳನ್ನು ಕೇಳಿದಾಗ ಅವರು ದನಕಾಯಲು ಬಿಟ್ಟು ಉಣ್ಣಲು ರೊಟ್ಟಿ ಕೊಟ್ಟು ಊರಿನ ವೃತ್ತಾಂತ ತಿಳಿಸುವರು. ಕನ್ನಿಕಾಮವ್ವ ಏಳಂತಸ್ತಿನಲ್ಲಿರುವಳು. ಅಲ್ಲಿಗೆ ಜೀರ ಸಂಗವ್ವ ಮಾತ್ರ ಹೋಗುವಳು ಎಂದು ತಿಳಿಸುವರು. ಅವರು ಅವಳ ಮನೆ ತೋರಿಸಿದಾಗ ಬೀರಣ್ಣ ಅವಳ ಮನೆಗೆ ಹೋದನು.

### ಕನ್ನೇಳುಕಾಮವ್ವಗ ವಜ್ಜರ ದಂಡಿ ಹೆಣದಾನ

ಸಂಗವ್ವಗ ರೊಟ್ಟಿಮಾಡಲು ತಿಳಿಸಿ ಬೀರಣ್ಣ ಭೂಮಿ ತೂಕದ ವಜ್ರದಂಡಿ ನೇಯ್ದು ಹೂವಿನದುರುಡಿಯಲ್ಲಿ ತುಂಬಿದ. ಅದನ್ನು ನೋಡಿ ಸಂಗವ್ವ ಮೂರ್ಛೆ ಹೋದಳು. ನಂತರ ಅವಳು ಪಶ್ಚಾತ್ತಾಪಪಟ್ಟು ತಡವಾಗಿದೆ ಮನೆಗೆ ತಂಗಿ ಮಗಳು ಬಂದಿದ್ದು ಎಂದು ಹೇಳುವೆನೆಂದು ಬೀರಣ್ಣನಿಗೆ ತಿಳಿಸಿ ಅರಮನೆಗೆ ಹೋದಳು. ಅರಮನೆಯಲ್ಲಿ ಕನ್ನಿಕಾಮವ್ವ ವಜ್ರದಂಡಿ ನೋಡಿ ಮೂರ್ಛೆಬಿದ್ದು ವಿಚಾರ ತಿಳಿದುಕೊಂಡು ಅರಮನೆಗೆ ಬರುವಂತೆ ತನ್ನ ವೇಷ ಧರಿಸಿ ಬರಲು ತಿಳಿಸಿದಳು.

### ಸೋದರತ್ತಿಯ ಮರಸೇನ ಸೋದರಮಾವನಿದ್ದಿಗೆ

ಸಂಗವ್ವ ತಂದುಕೊಟ್ಟ ಸ್ತ್ರೀ ಉಡುಪು ತೊಟ್ಟು ಬೀರಣ್ಣ ಅರಮನೆಗೆ ಹೋಗುವನು. ಎಂಥಾ ಸುಂದರ ರೂಪವತಿ ಎಂದು ಮುದ್ದು ಕೊಡುವಳು. ನಂತರ ಮಲಗಿದ್ದಾಗ ಕಾಲಲ್ಲಿ ಪದ್ಮ, ಬೆಳ್ಳಿ ಭುಜ, ನಕ್ಕರೆ ಹವಳ ಎಲ್ಲಾ ನೋಡಿ ನೀನೆ ನನ್ನ ಸೋದರ ಮಾವನೆಂದು ಮುದ್ದುಕೊಡುವಳು. ಎಲ್ಲಾ ವಿಚಾರ ಮಾಡುವಳು. ಬೀರಣ್ಣ ಈಗ ಹೋಗಿ ಮತ್ತೆ ಬರುವೆನೆಂದು ತಿಳಿಸುವನು.

### ಬಳೆಗಾರನಾಗಿ ಹೊನ್ನ ಹೊಸ್ತುಲಕ ಹೋಗ್ಯಾನ

ಬೀರಪ್ಪನು ತನ್ನ ಅಕ್ಕನಿಗೆ ಕನ್ನಿಕಾಮವ್ವಳನ್ನು ಭೇಟಿಯಾದುದು ತಿಳಿಸುವನು. ಮತ್ತು ಅಕ್ಕನಿಗೆ ಎತ್ತು, ಬಳೆಗಳನ್ನು ತರಿಸಿಕೊಂಡು ಮಾರುವೇಷದಲ್ಲಿ ನಗರಕ್ಕೆ ಬರುವನು. ಅಲ್ಲಿ ಗೆಳತಿಯಿಂದ ವಿಷಯ ತಿಳಿದ ಕಾಮವ್ವ ಬಳೆಬೇಕೆಂದು ಹಟಹಿಡಿಯುತ್ತಾಳೆ. ಏಳು ಪರದೆ ಕಟ್ಟಿ ಅಲ್ಲಿ ಬಳೆ ಹಿಡುವ ಕಾರ್ಯ ನಡೆಯುತ್ತದೆ. ಬೀರಣ್ಣ ನನ್ನ ಕಾಲು ಮಡಚುವುದಿಲ್ಲ ಎಂದೇಳಿ ಕಾಲು ಚಾಚುತ್ತಾನೆ. ಅವು ಕಾಮವ್ವಳ ತೊಡೆಮೇಲೆ ಹೋದಾಗ ಇವು ನನ್ನ ಸೋದರ ಮಾವನ ಕಾಲೆಂದು ಗುರ್ತಿಸುವಳು.

### ಗಿಡದ ಸಂಗಡಲ್ಲೇನ ಲಗ್ಗಣ ಮಾಡಿರಿ ಅಂದಾನ

ಬಳೆಯನ್ನು ಬೀರಣ್ಣ ಹಾಕುವಾಗ ಈಕೆಗೆ ಮದುವೆಯಾಗಿಲ್ಲ ನಾನು ಬಳೆ ಹಾಕುವುದಿಲ್ಲ ಎಂದ್ಹೇಳಿ ನಾನು ಬೀಜಕೊಡುವೆ ಕೆಲವೆ ಗಂಟೆಗಳಲ್ಲಿ ಅದು ಗಿಡವಾಗುತ್ತದೆ. ಅದರ ಜೊತೆ ಲಗ್ನ ಮಾಡಿ ಎಂದಾಗ ಎಲ್ಲಾರು ಒಪ್ಪುತ್ತಾರೆ. ಕೂಡಲೆ ವೇಷ ಬಿಸಾಕಿ ತನ್ನ ಅಕ್ಕಳ ಹತ್ತಿರ ಬೀರಣ್ಣ ಬರುತ್ತಾನೆ.

### ಚೆನ್ನಿಗ ತಮ್ಮ ಬೀರಣ್ಣನ ಸೂತರತೇಜಿ ತಂದಾಳ

ಬೀರಣ್ಮ ತನ್ನ ಅಕ್ಕನ ಹತ್ತಿರ ಮದುವೆಯಾದ ಸುದ್ದಿ ತಿಳಿಸಿ ಸೂತರ ತೇಜಿ ಬೇಕೆಂದು ಹಟಮಾಡಿ ಒಬ್ಬರು ಕುಳಿತುಕೊಳ್ಳಬಹುದಾದಂತಹ ಸೂತರ ತೇಜಿ ಮಾಡಿಸಿಕೊಡುವಳು.

### ಕನ್ನಿಕಾಮವ್ವನ ಗೆದ್ದು ಮನಿಗೆ ತಂದಾನ

ಸೂತರ ತೇಜಿಯೊಂದಿಗೆ ಅಂತರಗಮನ ಎಂದು ಹೇಳಿ ಆಕಾಶಮಾರ್ಗವಾಗಿ ಬಂದು ಏಳಂತಸ್ತಿನಲ್ಲಿದ್ದ ಕನ್ನಿಕಾಮವ್ವಳನ್ನು ಅದರಲ್ಲಿ ಕೂರಿಸಿ ಅಂಗಳದ ಗಿಡದಲ್ಲಿಟ್ಟು ನಾರಾಯಣ ಹತ್ತಿರ ಹೋದಾಗ ಬೀರಣ್ಣನ ಗುರುತು ಹಿಡಿದು ಶಿಕ್ಷೆ ನೀಡುವನು. ಕೊನೆಯ ಇಚ್ಛೆಯಂತೆ ಗಿಡದ ಮೇಲಿಂದ ಬರುವನೆಂದು ಬೀರಣ್ಣ ಗಿಡದಲ್ಲಿದ್ದ ಸೂತರತೇಜಿಯಲ್ಲಿ ಕುಳಿತು ಹಾರಿ ಹೋಗುತ್ತಾನೆ. ಕಾಳಿನಾರಾಯಣ ನಾನು ಸೋತೆನೆಂದು ಹೇಳುತ್ತಾನೆ.

ಬೀರಪ್ಪ ಹೆಂಡತಿಯೊಂದಿಗೆ ಅಕ್ಕನ ಮನೆಗೆ ಹೋದಾಗ ಅಕ್ಕ ಇಬ್ಬರನ್ನು ಆರತಿ ಮಾಡಿ ಬರಮಾಡಿಕೊಳ್ಳುವಳು.

### ೨.೮ ಲಿಂಗಬೀರಣ್ಣದೇವರ ವೃತ್ತಾಂತ

#### ಮುಂಗಿ ಪಟ್ಟಣದ ಅರಸನ ಮಗಳಿಗೆ ಬೆನ್ನ ಬ್ಯಾತಳ ಬ್ಯಾನೇನ

ಬೀರಣ್ಣನ ಮದುವೆಯಾದ ನಂತರ ಬೀರಣ್ಣ ಮತ್ತು ಅಕ್ಕ ಮಾಯವ್ವ ಎಲ್ಲರೂ ನಾಡನೋಡಲೆಂದು ಹೊರಡುವರು. ಅಕ್ಕ ಮಾಯವ್ವ ಬೀರಪ್ಪನಿಗೆ ಒಂದು ಷರತ್ತು ಹಾಕುವಳು. ನೀನು ನಾಡು ನೋಡಿ ಬರುವವರಿಗೂ ಮಗುವಾಗಿರಬೇಕೆಂದು ತಿಳಿಸುತ್ತಾಳೆ. ಅದಕ್ಕೆ ಬೀರಪ್ಪನು ತನ್ನ ಮಾಯದಾಟದಿಂದ ಮಗುವಾಗಿ ಅಕ್ಕನ ಬಗಲಲ್ಲಿ ಬಂದು ಮಲಗುತ್ತಾನೆ. ಹೀಗೆ ಅಕ್ಕ ಮಾಯವ್ವ, ಬೀರಪ್ಪ ನಾಡ ನೋಡಲು ಬರುವರು. ಅವರು ಬರುವ ಮೊದಲು ಊರು ಮುಂಗಿಪಟ್ಟಣ ಆ ಊರಿನ ರಾಜಕುಮಾರಿಗೆ ಬೆನ್ನ ಬ್ಯಾತಳಬೇನೆ ಬಂದಿರುತ್ತದೆ. ನಾಡ ವೈದ್ಯರೆಲ್ಲ ನೋಡಿದರು. ಆ ಕಾಯಿಲೆ ವಾಸಿಯಾಗಿರುವುದಿಲ್ಲ. ಅದಕ್ಕೆ ಅರಸ ತನ್ನ ಮಗಳ ಬ್ಯಾನಿ ಕಳೆದವರಿಗೆ ಅವಳನ್ನು ಕೊಟ್ಟು ಮದುವೆ ಮಾಡಿಕೊಡುವುದಾಗಿ ತಿಳಿಸುತ್ತಾನೆ. ಅದಕ್ಕೆ ಬೀರಪ್ಪನು ಆ ಬ್ಯಾನಿ ವಾಸಿಮಾಡುತ್ತೇನೆ ನನಗೆ ಬರೀ ಬಹುಮಾನ ಬೇಕೆಂದು ತಿಳಿಸಿ, ಅವಳ ಹಸ್ತ ಹಿಡಿದು ಎಳೆದಾಗ ಆ ಬ್ಯಾನಿ ವಾಸಿಯಾಗುತ್ತದೆ. ಅದರಿಂದ ಬೀರಪ್ಪನು ಬರೀ ಬಹುಮಾನ ಸ್ವೀಕರಿಸುತ್ತಾನೆ. ಹೀಗೆ ಬೀರಪ್ಪನು ತನ್ನ ಅಕ್ಕನೊಂದಿಗೆ ಕಲ್ಬುರ್ಗಿಯ ಕಲ್ಲತ್ತಿಗೆ, ಹೀಡಂಬ(ಸೇಡಂ) ಎಂಬ ಊರುಗಳಿಗೆ ಹೋಗಿ ಅಲ್ಲಿ ತನ್ನ ಪವಾಡಗಳನ್ನು ತೋರಿಸುವನು. ನಾಗರಹಾವಿನ ಎಡೆಯ ಮೇಲೆ ಕುಣಿದು ಅನೇಕ ರಾಕ್ಷಸರನ್ನು ಸಂಹರಿಸುತ್ತಾನೆ ಬೀರಪ್ಪ.

#### ಬಾಗಿಯ ಬಗನಾಥನಲ್ಲಿ ಮಾನ ಹೋಗಲು ಬಂತಯ್ಯ

ಅಕ್ಕ-ತಮ್ಮ ಹೀಗೆ ಸಾಗಿರಲು ಕಾಯಿಕೊಂಕಣ ನಾಡಿಗೆ ಹೊರಟರು. ಅಲ್ಲಿ 'ಸಿರವಾಳ' ಎಂಬ ಊರು. ಅಲ್ಲಿ ಸುಂದರವಾದ ದೇವಾಲಯವಿದೆ. ಆ ಪ್ರದೇಶವನ್ನು ಬಾಗಿಯ ಬಗನಾಥನು ಆಳುತ್ತಿದ್ದನು. ಮರದ ಕೆಳಗೆ ಮಲಗಿರುವ ಅಕ್ಕ-ತಮ್ಮ ಅಲ್ಲಿ ಬೀರಪ್ಪ ಮಾಯದಾಟವಾಡುವನು. ಅಕ್ಕನ ಬಗಲಿನಿಂದ ಎದ್ದು ಬಂದು ದೇಗುಲದ ಬಾವಿಯಲ್ಲಿ ಈಜಿ ನೀರೆಲ್ಲ ರಾಡಿ ಮಾಡಿದನು. ಅಲ್ಲಿರುವ ಗಿಡದ ಹೂಗಳನ್ನೆಲ್ಲಾ ಕೀಳುವನು. ಬಗನಾಥನ ಪೂಜಾರಿ ಬಂದು ನೋಡಿ ಅದರ ಜೊತೆಗೆ ಗಿಡದ ಪಕ್ಕದಲ್ಲಿ ಮಲಗಿರುವ ಅಕ್ಕವ್ವಳನ್ನು ನೋಡಿ ಮರುಳಾಗಿ ಬಗನಾಥನಲ್ಲಿ ಹೋಗಿ ಕೈಲಾಸದಿಂದ ಆರೂಪ ನಿನಗಾಗಿ ಬಂದಿರುವುದೆಂದು ತಿಳಿಸಿದಾಗ ಬಾಗನಾಥನು ಪೈಲವಾನರನ್ನು ಕಳುಹಿಸಿ ಹಗ್ಗದಿಂದ ಕಟ್ಟಿ ಮಾಯವ್ವಳನ್ನು ತರುವನು. ಬಾಗನಾಥನು ಮಾಯವ್ವಳ ರೂಪದ ಮೋಡಿಗೆ ಮರುಳಾದ ಅವನು ಸೀರೆ ಸೆರಗು ಎಳೆದು ಮಂಚಕ್ಕೆ ಕರೆಯುವನು. ಆಗ ಬೀರಪ್ಪನಿಗೆ ಕೋಪ ಬಂದು ತನ್ನ ಅಕ್ಕನ ಮಡಿಲಿನಿಂದ ಜಿಗಿದು ಬಂದು ನಿಲ್ಲುವನು. ಬಾಗನಾಥನ ಸಂಹಾರಮಾಡಿ ಅಲ್ಲೇ ವಾಸವಾಗುವರು. ಅದಕ್ಕೆ ಅದು 'ಸಿರವಾರ'ವಾಗಿ ಮುಂದುವರೆಯುತ್ತದೆ.

#### ದೈತ್ಯ ಕ್ವಾಣೇಸೂರನ ನಾನೇ ಹೊಡದಿನಿ ಅಂದಾನ

ಅಕ್ಕ-ತಮ್ಮ ಇಬ್ಬರು ಮತ್ತೆ ಮುಂದೆ ನಡೆದರು ನಾಡ ನೋಡಲೆಂದು. ಕ್ವಾಣಗನೂರಿಗೆ ಬಂದರು. ಅಲ್ಲಿ ದೈತ್ಯ ಕ್ವಾಣೇಸೂರ ಒಂದು ಮಗ್ಗುಲಲ್ಲಿ ಒಂದಾರು ತಿಂಗಳು ಮಲಗುವ ದಾರಿಯಲ್ಲಿ ಮಲಗಿದಾತನ ಎಚ್ಚಿಸುವ ಸಾಹಸ ಯಾರೂ ಮಾಡುವುದಿಲ್ಲ, ಆಗ ಬೀರಪ್ಪನು ತನ್ನ ಮಾಯದಾಟ ನಡೆಸುವನು. ಆಗ ಕ್ವಾಣೇಸೂರನಿಗೆ ಕನಸೊಂದು ಬೀಳುತ್ತದೆ. ತನಗೆ ಮದುವೆಯಾದಂತೆ ಭಾಸವಾಗುತ್ತದೆ. ಎದ್ದು ಕುಳಿತು ನೋಡಿದಾಗ ಬೀರಪ್ಪ ಯುದ್ಧಕ್ಕೆ ಆಹ್ವಾನಿಸುವನು. ಆ ಯುದ್ಧದಲ್ಲಿ ಕ್ವಾಣೇಸೂರನನ್ನು ಸಂಹಾರ ಮಾಡುವನು.

#### ವನದೇವತಿನಲ್ಲೇಳ ಪ್ರಾಣಬಿಟ್ಟು ಹೋದಾಳ

ಅಕ್ಕ-ತಮ್ಮ ಸೇರಿ ಚಿಂಚಲಸೂರ ವನದೇವತೆ ಎಡೆಗೆ ಹೊರಟರು. ಅಲ್ಲಿಗೆ ಹೋಗಿ ತಮಗೆ ಸ್ಥಳಬೇಕೆಂದು ಕೇಳಿದರು. ಅದಕ್ಕೆ ವನದೇವತೆ ಒಪ್ಪುವುದಿಲ್ಲ. ಅದಕ್ಕೆ ಬೀರಪ್ಪನು ಅವಳನ್ನು ಯುದ್ಧಕ್ಕೆ ಆಹ್ವಾನಿಸುವನು. ಯುದ್ಧದಲ್ಲಿ ವನದೇವತೆ ಸಂಹಾರವಾಗುವಳು. ಆಗ ಅವರು ಅಲ್ಲೆ ಖಾಯಂ ಆಗಿ ನೆಲೆಸುವರು.

### ಅಕ್ಕನ ಕರಕೊಂಡ ಬರಬೇಕ ಹಬ್ಬ ಮಾಡಬೇಕಂದಾನ

ಇಬ್ಬರು ಚಿಂಚಲಸೂರಿನಲ್ಲಿದ್ದಾಗ ಬೀರಣ್ಣನು ಬೆಳ್ಳಿಗಿರಿಗೆ ಹಿಂತುರಿಗಿ ಬರುವಾಗ ಅಕ್ಕ ಮಾಯವ್ವ ತನ್ನಲ್ಲಿದ್ದ ಕುರಿಗಳನ್ನು ಬೀರಪ್ಪನಿಗೆ ಒಪ್ಪಿಸುವಳು.ಬೀರಪ್ಪನು ತನ್ನ ಕುರಿಗಳನ್ನು ಕಾಯಲು ಬೊಪ್ಪಣ್ಣನನ್ನು ನೇಮಿಸಿ ಬೆಳ್ಳಿಗಿರಿಗೆ ಬರುವನು. ಆದರೆ ಕುರಿಗಳು ಎಲ್ಲಾ ಬಂಜೆಯಾದವು. ಚಿಂತೆಗೀಡಾದ ಬೀರಪ್ಪನಿಗೆ ಅಕ್ಕನ ಕರೆದುಕೊಂಡು ಬಂದು ಹಬ್ಬ ಮಾಡಿದರೆ ಅಕ್ಕನ ಹಾರೈಕೆಯಿಂದ ಎಲ್ಲಾ ಒಳ್ಳೆಯದಾಗುವುದು ಎಂದು ತಿಳಿದು ಬೊಪ್ಪಣ್ಣನನ್ನು ರೊಟ್ಟಿಬುತ್ತಿ ಮಾಡಿಸಿ ಕಳುಹಿಸುವನು. ಚಿಂಚಲಸೂರಿನಲ್ಲಿರುವ ಅಕ್ಕ ಇದನ್ನು ನೋಡಿ ಮನದಲ್ಲಿ ಮರುಗಿ ತನ್ನ ಮನೆಯಲ್ಲಿ ತಮ್ಮನಿಗಾಗಿ ಹಬ್ಬಮಾಡಿ ತಮ್ಮನಿಗೆ ಬುತ್ತಿಕಟ್ಟಿ ಕಳುಹಿಸುವಳು.

### ಕರಿಯಲಾಕ ಬಂದಿಲ್ಲೆ ಕಾಡಲಾಕ ಬಂದಿನಿ ಅಂದಾನ

ಬೊಪ್ಪಣ್ಣ ಚಿಂಚಲಸೂರಿನಿಂದ ಅಕ್ಕಮಾಡಿಕೊಟ್ಟ ಬುತ್ತಿ ತೆಗೆದುಕೊಂಡು ಬೆಳ್ಳಿಗಿರಿಗೆ ಬರುವನು. ನಡೆದ ವಿಷಯ ತಿಳಿಸುವನು. ಕ್ರೋಧಗೊಂಡ ಬೀರಣ್ಣ ತಾನೇ ಸ್ವತಃ ಚಿಂಚಲಸೂರಿಗೆ ಬರುವನು. ತಮ್ಮ ಬಂದನೆಂದು ಸಂಭ್ರಮದಿಂದ ಮಣೆಹಾಕಿ ಕುಳ್ಳಿರಿಸಲು ಹೋದರೆ ಕರಿಯಕೆ ಬಂದಿಲ್ಲಾ ಕಾಡಲಾಕ ಬಂದಿನಿ ಎಂದು ಗುಡಸಿನಿಂದಲೆ ಉತ್ತರಿಸಿದನು. ತಾನು ಬಯಸಿದ ಹಾಗೆ ನಾಗರಹೆಡೆಯ ಮೇಲೆ ಕುಳಿತು ತಾನು ಬಯಸಿದ್ದನ್ನು ಅಕ್ಕನಿಂದ ಪಡೆದುಕೊಂಡು ಪ್ರಸನ್ನನಾಗಿ ಕಾಡಲು ಬಂದಿಲ್ಲ ಕರೆಯಲು ಬಂದಿನಿ ಎಂದ್ಹೇಳಿ ಅಕ್ಕನಲ್ಲಿ ವಿನಂತಿಸಿಕೊಳ್ಳುವನು.

### ಹಬ್ಬಮಾಡಲಿ ಮಾಯವ್ವ ತಮ್ಮನ ಮನೀಗಿ ಬಂದಾಳ

ತಮ್ಮನ ವಿನಂತಿಯ ಮೇರೆಗೆ ಅಕ್ಕ ಮಾಯವ್ವ ಬೆಳ್ಳಿಗಿರಿಗೆ ಬರುವಳು. ತಮ್ಮ ಅಕ್ಕನಿಗಾಗಿ ಉಡಿ ಸೀರೆಯನ್ನು, ಕಂಬಳಿಹಾಸಿ ಕುಳ್ಳಿರಿಸುವನು. ಇದು ಅಕ್ಕನ ಮನಸ್ಸಿಗೆ ಬರುವುದಿಲ್ಲ. ಸೆರಿಗಿನಲ್ಲಿ ಮುಖಹಾಕಿ ತಾಯಿಯಿಲ್ಲದ ತವರಿಗೆ ಬರಬಾರದೆಂದು ದುಃಖಿಸುವಳು. ಇದನ್ನರಿತ ಬೀರಣ್ಣ ಅಕ್ಕನ ಮನಸ್ಸಿಗೆ ಎಳ್ಳಷ್ಟು ನೋವಾಗದಂತೆ ಹಬ್ಬದ ಎಲ್ಲಾ ತಯಾರಿ ಮಾಡುವನು. ಇದು ಮಾಯವ್ವಳಿಗೆ ತುಂಬಾ ಸಂಭ್ರಮವನ್ನುಂಟು ಮಾಡುತ್ತದೆ. ಆಗ ಬೀರಪ್ಪ ತನ್ನ ಅಕ್ಕನನ್ನು ಚಿಂಚಲಸೂರಿಗೆ ಬಿಟ್ಟು ಬರಲು ಬೊಪ್ಪಣ್ಣನನ್ನು ಕಳುಹಿಸಿದನು.

## ೨.೯ ಮಾಳಿಂಗರಾಯನ ಪೂರ್ವಜರ ವೃತ್ತಾಂತ

### ಸ್ವಾಮರಾಯ ತುಕ್ಕಪ್ಪರಾಯ ಬಾಲಜನ್ನಿಗಿ ಕಾಯ್ದಾರ

ಶ್ಯಾಡಬಾಬನಗುಡ್ಡದಲ್ಲಿ ಗುರುಗೋರಕನಾಥನಲ್ಲಿ ಏಳುನೂರು ಬಾಲಜನ್ನಿಗಿಗಳಿದ್ದವು. ಮೂರು ವರ್ಷಗಳವರೆಗೆ ಮಳೆ-ಬೆಳೆ ಆಗಲಿಲ್ಲ. ಇದರಿಂದ ತುಂಬಾ ತೊಂದರೆಯಾಗಿ ನಾಲ್ಕು ದಿಕ್ಕುಗಳಿಗೆ ಪತ್ರ ಕಳುಹಿಸಿದ. ಗುರು ಯಾವ ಕಡೆಯಿಂದಲೂ ಪ್ರತಿಕ್ರಿಯೆ ತೋರಲಿಲ್ಲ. ದಕ್ಷಿಣ ದಿಕ್ಕಿನಲ್ಲಿರುವ ಸ್ವಾಮರಾಯ ಪತ್ರ ಓದಿದ. ಗುರುವಿಗೆ ಸಂಕಷ್ಟ ಬಂದಿದೆಯೆಂದು ಧಾವಿಸಿ ಬಂದ. ಮೇವಿದ್ದ, ನೀರಿದ್ದ ನಾಡಿಗೆ ಹೋಗಿ ಎಂದು ಗುರು ಹೇಳಿದ. ಆದರೆ ಸ್ವಾಮರಾಯ ಎಲ್ಲದರ ಜೊತೆಗೆ ಗುರುಗಳು ತಾವು ಬರಬೇಕೆಂದು ಹಟಹಿಡಿದು ಕುಳಿತುಕೊಂಡ. ಇದಕ್ಕೆ ಒಪ್ಪಿದ ಗುರು ಹಸುಗಳನ್ನು ಸಲಹುತೊಡಗಿದ.

### ಜ್ಯಾತಿ ಜ್ಯೋತಿ ಮಕ್ಕಳ ಜಕ್ಕಪ್ಪ-ಮಾಳಪ್ಪರ ಜನನ

ಕೆಟ್ಟಬ್ಯಾಸಿಗೆ ಬಿಸಿಲು ಮನೆಯಲ್ಲಿ ಅಕ್ಕ ಕಾನಾಬಾಯಿ, ತಂಗಿ ಅಮೃತಾಬಾಯಿ ಇಬ್ಬರೆ ಇದ್ದಾರೆ. ಶಿವಪಾರ್ವತಿಯರು ಇವರಲ್ಲಿಗೆ ವೃದ್ಧರ ವೇಷದಲ್ಲಿ ಬರುವರು. ಇವರಿಗೆ ಮಕ್ಕಳಿಲ್ಲದಿರುವುದನ್ನು ಗಮನಿಸಿ ಶಿವನು ತನ್ನ ಕೊರಳಿನ ಮಾಣಿಕ್ಯದ ಹರಳನ್ನು, ಪಾರ್ವತಿ ತನ್ನ ಜಂಬುನೀಲದ ಹರಳನ್ನು ತೆಗೆದು ಕೊಡುತ್ತಾಳೆ. ಇವನ್ನು ದೇವರ ಜಗುಲಿಯ ಮೇಲೆ ಇಡಲು ಹೇಳಿಹೋಗುತ್ತಾರೆ. ಮನೆಗೆ ಬಂದ ಗಂಡಂದಿರು ಯಾರಾದರೂ ಬಂದಿದ್ದರೆ ಎಂದು ವಿಚಾರಮಾಡಿದಾಗ ವೃದ್ಧದಂಪತಿಗಳು ಬಂದು ಮಕ್ಕಳ ಫಲಕೊಟ್ಟು ಹೋದುದನ್ನು ಗಮನಿಸಿ, ಹೋಗಿ ದೇವರ ಜಗುಲಿ ಮೇಲೆ ನೋಡಿದರೆ ಆ ಹರಳುಗಳು ಮಾನವ ಪಿಂಡಗಳಾಗಿದ್ದವು. ಅವುಗಳಿಗೆ

ಜಕ್ಕಪ್ಪಮಾಳಪ್ಪ ಎಂದು ಕರೆದು ಏಳುವರ್ಷಗಳ ನಂತರ ಮತ್ತೆ ಬರಗಾಲ ಕಾಣಲು ಅಲ್ಲಿಂದ ಬಾರಮತಿ ಅಡವಿಗೆ ಬರಲು ಬಾರಾಮತಿ-ತೇರಾಮತಿ ಊರುಗಳನ್ನು ಸೃಷ್ಟಿಸಿ ಅಲ್ಲಿ ಉಳಿದರು.

**ಭವೂಳಿನಾಡದ ಗೌಳೇರಾ ಬಾರಾಮತಿಯ ಅಡವ್ಯಾಗ**

ಭವೂಳಿ ನಾಡದ ಗೌಳೇರಾ ಏಳನೂರು ಎಮ್ಮೆಗಳನ್ನು ಸಾಕಿದ್ದರು. ತಮ್ಮ ನಾಡಿನಲ್ಲಿ ಮೇವಿನ ಬರಗಾಲ ನೀರಿನ ಬರಗಾಲ ಬಂದಿದ್ದರಿಂದ ತಮ್ಮಲ್ಲಿ ಗುಂಪಿನಲ್ಲಿ ಆ ಏಳುನೂರು ಎಮ್ಮೆಗಳನ್ನು ಹೊಡೆದುಕೊಂಡು ಬಂದು ಬಾರಾಮತಿಯಲ್ಲಿ ನೆಲೆಸಿದರು. ಮನೆಯ ದೇವತೆಯನ್ನು ನೆನೆಯುತ್ತ ಅಲ್ಲೇ ಉಳಿದರು.

**ಭವೂಳಿ ನಾಡದ ಗೌಳೇರಿಗ ಇಜೇರಿ ಮಲ್ಲಕವ್ವ ಕಾಡ್ಯಾಳ**

ಗೌಳಿಗರ ಹಾಲುಮೊಸರಿನ ವ್ಯಾಪಾರ ಭರದಿಂದ ನಡೆಯಿತು. ಬಾರಾಮತಿ, ಸೇರಾಮತಿ ಸಂತೆಮಾಡುತ್ತಾ ಎಲ್ಲಾರು ಶ್ರೀಮಂತರಾದರು. ಹಣಗಳಿಸುವ ಭರದಲ್ಲಿ ಮನೆದೇವತೆಯಾಗಿ ಇಜೇರಿಮಲ್ಲವ್ವನನ್ನು ಮರೆತುಬಿಟ್ಟರು. ಇದರಿಂದ ಕ್ರೋಧಗೊಂಡ ಮನೆದೇವತೆ ಉರಿದು ಬೆಂಕಿಯಾದಳು. ಇದರಿಂದ ಅವಳು ಎಮ್ಮೆಗಳ ಮೇಲೆ ಕರುಗಳ ಮೇಲೆ ತನ್ನ ಸ್ವಭಾವ ಬೀರಿ ಕೈಲಾಸದ ಕಡೆ ನೋಡಿದಳು. ಪಾರ್ವತಿಯಿಂದ ವರ ಪಡೆದು ಅವುಗಳ ಮೇಲೆ ಎರಗಿದಳು. ಪಾರ್ವತಿ ಕೊರವಂಜಿ ವೇಷದಲ್ಲಿ ಬಂದು ಮನೆದೇವತೆಯನ್ನು ಮರೆತಿದ್ದೀರಿ. ಅವಳು 'ನರಬಲಿ' ಕೇಳಿದ್ದಾಳಂತೆ ಎಂದ್ಹೇಳಿ ಭಂಡಾರ ಕೊಟ್ಟು, ಎಲ್ಲಾ ಸರಿ ಮಾಡಿದಳು.

**ಗಾಣಗೇರ ಮಲ್ಲಣ್ಣನ ಬಲಿಯ ಕೊಡುತಾರೇನ**

ದೇವತೆ ಕಾಡಿ ದೂರಿದುದರಿಂದ ಗೌಳಿಗೇರು ಈಗ ತಮ್ಮ ಮನೆದೇವತೆಯಾಗಿ ಇಜೇರಿ ಮಲ್ಲವ್ವಳಿಗೆ ನರಬಲಿ ಕೊಡಲು ಯೋಚಿಸಿ ಗಾಣಗೇರ ಮಲ್ಲಣ್ಣ ಶ್ರೀಮಂತ ಅವನಿಗೆ ಎಡೆಯ ಪದಾರ್ಥಕೊಟ್ಟು ಅಡುಗೆ ಮಾಡಿಸಿ ಅವನಿಂದ ನೈವೇದ್ಯ ಮಾಡಿಸಿ, ಮಲ್ಲಣ್ಣ ಭಕ್ತಿಯಿಂದ ಅಡ್ಡಬಿದ್ದು ನಮಸ್ಕಾರ ಮಾಡುತ್ತಿದ್ದ. ಇದನ್ನೆ ಕಾಯುತ್ತಿದ್ದ ಗೌಳಗೇರು ಮಲ್ಲಣ್ಣನ ಕುತ್ತಿಗೆಯನ್ನು ಹಾರಿಸಿದರು. ಇದರಿಂದ ಮನೆದೇವತೆ ಸಂತಸಪಟ್ಟಳು.

**ಬಿಲ್ಲಾಳ ಶ್ಯಾಮರಾಯನೇ ಚಾಗ ಪಡೆಯುತ್ತಾನೇನ**

ಹಬ್ಬಮಾಡಿ ಗೌಳಿಗರು ಸಂಭ್ರಮದಲ್ಲಿ ಮಲಗಿದರು. ನಡುರಾತ್ರಿಯಲ್ಲಿ ಅವರ ಕಡೆಯ ಏಳುನೂರು ಎಮ್ಮೆಗಳು ಊರಗೌಡ ಶ್ಯಾಮರಾಯನ ಹೊಲಕ್ಕೆ ಹೋಗುವವು. ಹೊಲದಲ್ಲಿದ್ದ ಶ್ಯಾಮರಾಯ ಅವುಗಳನ್ನು ನೋಡಿ ಅವುಗಳನ್ನು ಊರಕಡೆಗೆ ಹೊಡೆದ. ಹಬ್ಬದ ವಾಸನೆ ನೋಡಿ ನನಗೆ ತಿಳಿಸದೆ ಹಬ್ಬ ಮಾಡಿದಿರಿ ಎಂದು ಗೌಳಿಗರನ್ನು ಕೇಳಿದಾಗ ಅವರು ಕ್ಷಮೆಯಾಚಿಸಿ, ಮನೆದೇವತೆಯ ಮುಂದೆ ಹಾಕಿದ್ದ ರಂಗದ ಒಂದು ಮೂಲಿ ಚೌಜ ಪಡೆದು ಬರುವನು.

**ಇಜೇರಿ ಮಲ್ಲಕ್ಕವ್ವನೇ ಸ್ಯಾಮರಾಯನ ಬೆನ್ನಹತ್ಯಾಳ**

ಸ್ಯಾಮರಾಯನು ಗೌಳಿಗರಿಂದ ಪೂಜೆ ಮಾಡಿಸಿಕೊಂಡು ಬರುವಾಗ ಇಜೇರಿ ಮಲ್ಲವ್ವಳು ಅವನಿಂದೆನೆ ಬರುವಳು. ಅವನ ಏಳುನೂರು ಹಸುಗಳು ರಕ್ತಹಿಂಡಿದವು. ಕರುಗಳಿಗೆ ಬ್ಯಾನಿ ಬಂದಿತು. ಪಾರ್ವತಿಯನ್ನು ಕರೆಸಿಕೊಂಡು ಕೊರವಂಜಿ ನಾಗವ್ವನ ವೇಷ ಧರಿಸಿ ಸ್ಯಾಮರಾಯನಿಗೆ ತಿಳಿಸುವಳು. ಎಳೆ ಮಗುವನ್ನು ಬಲಿಕೇಳುವಳು ಅದರಂತೆ ಎಳೆಮಗುವನ್ನು ಬಲಿಕೊಟ್ಟಾಗ ದೇವತೆ ಪ್ರಸನ್ನಳಾಗುವಳು. ಎಲ್ಲಾ ಸರಿಯಾಗುವುದು. ಆದರೆ ಮಗುವಿನ ಕಡೆಯವರು ಮಾಹಿತಿ ತಿಳಿದು ಬಂದಾಗ ದೇವತೆ ಅಲ್ಲಿ ಪವಾಡ ಮಾಡಿ ತೋರಿಸುವಳು. ಮುಂದೆ ಶ್ಯಾಮರಾಯ ಸುಕ್ಕಪ್ಪರಾಯನ ಜೊತೆ ಚರ್ಚಿಸಿ ಉಂಬಳಿರಾಣಿ ಅಡವಿಗೆ ಹಸುಗಳೊಂದಿಗೆ ಬರುವರು.

**ಏಳುನೂರು ಬ್ಯಾಡರ ಒಂದೇ ಏಟಿಗೆ ಹೋದರ**

ಉಂಬಳಿರಾಣಿಯಲ್ಲಿ ಹಸುಗಳನ್ನು ನೋಡಿಕೊಳ್ಳುತ್ತ ಸಮೃದ್ಧವಾಗಿ ಹಚ್ಚ-ಹಸುರಿನಲ್ಲಿ ವಾಸವಾಗಿದ್ದರು. ಕೋಟೆಯ ಮೇಲೆ ಶಾಮರಾಯ, ತುಕ್ಕಪ್ಪರಾಯ ಇದ್ದರು. ಪಕ್ಕದ ಗ್ರಾಮದ ಬೇಡರು ಬಂದು ಅವರಲ್ಲಿದ್ದ

ಬಾಣಗಳನ್ನು ನೋಡಿ ಹೆದರಿ ಓಡಿದರು. ಅಣ್ಣತಮ್ಮ ಅಗಲಿದಾಗ ಬರಬೇಕೆಂದು ನಿರ್ಧಾರ ಮಾಡಿದರು. ಅದರಂತೆ ಒಬ್ಬ ಬೇಡನನ್ನು ಮರದ ಮೇಲೆ ಕುಳ್ಳಿರಿಸಿ ಹೋದರು. ಅಣ್ಣತಮ್ಮ ಅಗಲಿದ ದಿನ ಸನ್ನೆ ಮಾಡಿ ಎಲ್ಲಾ ಬೇಡರು ಬರಬೇಕೆಂದು ನಿಶ್ಚಯ ಮಾಡಿಕೊಂಡರು.

**ಅಣ್ಣ ತುಕ್ಕಪ್ಪರಾಯ ಬಾಣ ಬಡಿದು ಕೊಂಡಾನ**

ಶಾಮರಾಯನು ಜಡ್ಡುಗಟ್ಟಿದ ತನ್ನ ಮೈಯನ್ನು ಸ್ವಚ್ಛಗೊಳಿಸಿಕೊಳ್ಳಲು ಮನೆಯಲ್ಲಿಳಿದುಕೊಂಡನು. ತುಕ್ಕಪ್ಪರಾಯ ಒಬ್ಬನೆ ಕೋಟೆಯ ಸುತ್ತ ದನಗಳನ್ನು ಮೇಯಿಸುತ್ತ ಇದ್ದನು. ತಾನು ತಂದ ಬುತ್ತಿಯನ್ನು ಮೀನು-ಮೊಸಳೆಗೆ ಹಾಕಲು ಅವು ಸತ್ತವು. ಹೆದರಿದ ತುಕ್ಕಪ್ಪರಾಯ ಬುತ್ತಿಯನ್ನು ಮಣ್ಣಿನಲ್ಲಿ ಮುಚ್ಚಿದನು. ಅಷ್ಟರಲ್ಲಿ ಮರದ ಮೇಲಿಂದ ಒಬ್ಬ ಬೇಡ ಬಲೆ ಬೀಸಿದ, ಎಲ್ಲಾ ಬೇಡರು ಒಮ್ಮೆಲೆ ದಾಳಿ ನಡೆಸಿದರು. ಅವರಿಂದ ಸಾಯುವುದಕ್ಕಿಂತ ನಾನೇ ಸಾಯುವುದು ಮೇಲೆಂದು ತನಗೆ ತಾನೇ ಬಾಣ ಹೊಡೆದುಕೊಂಡನು.

**ಅಣ್ಣತುಕ್ಕಪ್ಪರಾಯನ ಸಮಾಧಿ ಮಾಡುತರೇನ**

ತುಕ್ಕಪ್ಪರಾಯ ಬಾಣಹೊಡೆದುಕೊಂಡಾಗ ಬೇಡರು ಎಲ್ಲಾ ಹಸುಗಳನ್ನು ಹೊಡೆದುಕೊಂಡು ಹೋಗಲು ನಿರ್ಧರಿಸಿದರು. ಆದರೆ ಅದರಲ್ಲಿದ್ದ ಗೂಳಿಗಳು ಬೇಡರ ಮೇಲೆ ತಿರುಗಿ ಬಿದ್ದವು. ಬೇಡರೆಲ್ಲರು ಓಡಿಹೋದರು. ಎಲ್ಲಾ ಗೂಳಿಗಳು, ಹಸುಗಳು ಬಂದು ತುಕ್ಕಪ್ಪರಾಯನಿಗೆ ಬಾಲದಿಂದ ಗಾಳಿ ಬೀಸಿದವು. ಶಾಮರಾಯನಿಗೆ ವಿಷಯ ತಿಳಿಸಲು ಮೂರು ಹಸುಗಳು ಹೋದವು. ಮಲಗಿದ್ದ ಶಾಮರಾಯ ಎದ್ದುಬಂದನು. ತುಕ್ಕಪ್ಪರಾಯ ತಾನೇ ಬಾಣ ಹೊಡೆದುಕೊಂಡ ವಿಷಯ ತಿಳಿದು ತುಂಬಾ ದುಃಖಿಸಿದನು. ಎಲ್ಲಾ ಮಕ್ಕಳಿಗೆ ತಿಳಿಯಲೆಂದು ದುಃಖದ ಕೊಳಲೂದಿದ. ಮಕ್ಕಳಿಗೆ ಬೇಡರ ಮೇಲೆ ಸೇಡುತೀರಿಸಿಕೊಳ್ಳಲು ಹೇಳಿದರು. ಶಾಮರಾಯ ಅಣ್ಣನ ಎದೆಯಿಂದ ಬಾಣ ಕಿತ್ತು ಸಮಾಧಿ ಮಾಡಿದನು.

**ಬಿಲ್ಲಾಳ ಸ್ಯಾಮರಾಯನ ಡಿಳ್ಳಿ ರಾಜಕೀ ಗೆದಿತಾನ**

ದಿಲ್ಲಿ ಸುಲ್ತಾನಪುರದಲ್ಲೊಬ್ಬ ಭಾಷಾ ಆಳುತ್ತಿದ್ದನು. ಗುರುಗೋವಿಂದನಾಥನ ಅಪ್ಪಣೆಯಂತೆ ಶಾಮರಾಯ ಅಲ್ಲಿಗೆ ಬಂದು ಸೆರೆಸಿಕ್ಕಿದನು. ಎಲ್ಲಾರನ್ನು ಬಡಿದು ಹಾಕಲು, ಹುಲಿಯ ಮನೆಗೆ, ಆಗೆಮನೆಗೆ, ಪೈಲ್ವಾನರ ಮನೆಗೆ ಹಾಕಿಸಿದರು. ಶಾಮರಾಯ ಗೆದ್ದನು. ಕೊನೆಗೆ ಭಾಷ ಪಗಡೆ ಆಟಕ್ಕೆ ಕರೆದು ಸೋತನು. ಆಗ ಭಾಷಾನು ಶಾಮರಾಯನಿಗೆ ಅರಸನ ಪಟ್ಟಕಟ್ಟಿದನು.

**ಜಕ್ಕಪ್ಪ ಮಾಳಪ್ಪರು ತಂದೆ ಶೋಧ ಮಾಡ್ಯಾರ**

ಶಾಮರಾಯ ಅರಸನಾದ ಮೇಲೆ ಮಕ್ಕಳನ್ನು, ಗುರುವನ್ನು ಎಲ್ಲಾರನ್ನು ಮರೆತು ಬಿಡುವನು. ಸುಖ ಸುಪ್ಪತ್ತಿಗೆಯಲ್ಲಿದ್ದ ಶ್ಯಾಮರಾಯನನ್ನು ಗುರು ಅವಲೋಕಿಸಿ ಮಕ್ಕಳನ್ನು ಕಳುಹಿಸುವನು. ಮಕ್ಕಳೂ ಸುಲ್ತಾನಪುರಕ್ಕೆ ಬಂದು ಹೂದೋಟನಾಶ ಮಾಡಿ ತಮ್ಮ ಪರಿಚಯ ಬಂಡೆಯ ಮೇಲೆ ಬರೆದು ಹೋಗುವರು. ವಿಚಾರ ತಿಳಿದುಕೊಂಡ ಶಾಮರಾಯ ಎಲ್ಲಾ ಗಮನಕ್ಕೆ ತಂದುಕೊಂಡ. ಭಾಷನಿಗೆ ಆಳ್ವಿಕೆ ಬಿಟ್ಟುಕೊಟ್ಟು, ಮಕ್ಕಳನ್ನು, ಗುರುವನ್ನು ಸೇರಿಕೊಂಡು ಅಲ್ಲಿಂದ ಅನೇಕ ದಂಡು ಪಡೆದುಕೊಂಡು ಬಂದನು. ಬರುವಾಗ ಏಳುನೂರು ಬ್ಯಾಡರನ್ನು ಸದೆಬಡಿದು ಅಣ್ಣ ತುಕ್ಕಪ್ಪರಾಯನ ಸಮಾಧಿಯ ಮುಂದೆ ಅವರನ್ನು ಸಮಾಧಿ ಮಾಡುವನು.

**ಚಿಕ್ಕಪ್ಪರಾಯ ಮಾಳಿಂಗ ರಾಯರ ಮದುವೆ**

ಶ್ಯಾಡಬಾಬನ ಗುಡ್ಡದಿಂದ ಹುಲುಜಂತಿಗೆ ಬಂದು ವಾಸವಾದರು. ಶಾಮರಾಯ ಜಕ್ಕಪ್ಪನಿಗೆ ಮಾಳಿಂಗರಾಯನಿಗೆ ಮದುವೆ ಮಾಡಲು ನಿರ್ಧರಿಸಿದ. ಏಣಿಕಿ ಊರಿನ ಬಾಕುಬಾಯಿಯನ್ನು ಜಕ್ಕಪ್ಪನಿಗೆ, ಕೆಂಪೂರಿನ ಶರಣಮ್ಮನನ್ನು ಮಾಳಿಂಗರಾಯನಿಗೆ ತುದ ಮದುವೆ ಮಾಡಿದರು.

## ೨.೧೦ ಮಾಳಿಂಗರಾಯ ಬೀರಪ್ಪನ ಸೇವೆಯಲ್ಲಿ

### ಲಿಂಗಬೀರಣ್ಣದೇವರು ಶಿಷ್ಯ ಮಾಳನ ಪಡದಾನ

ಹಬ್ಬಕ್ಕೆ ಬಂದಿದ್ದ ಅಕ್ಕ ಮಾಯವ್ವಳನ್ನು ಬೊಪ್ಪಣ್ಣ ಕಳುಹಿಸಿ ಬರುವುದನ್ನೆ ಬೀರಪ್ಪ ಬೆಳ್ಳಿಗಿರಿಯಲ್ಲಿ ನೋಡುತ್ತಿದ್ದನು. ಬೊಪ್ಪಣ್ಣನು ಬಂದನು. ಮಾಯವ್ವ ಕಳುಹಿಸಿದ ಬುತ್ತಿಯನ್ನು ಎಲ್ಲಾರು ಊಟಮಾಡಿದರು. ರಾತ್ರಿಯಲ್ಲಿ ಬೀರಪ್ಪನು ತನ್ನ ಆಕ್ಕನಿಗೆ ಸೀರೆತೊಡಸಿ ಹಬ್ಬ ಮಾಡಿದ್ದನ್ನು ನೆನೆದನು. ತನ್ನ ಗೆಳೆಯನಿಗೆ ಹೆಂಡತಿಗೆ ತಾನು ಹೊರಡುವುದು ಹೇಳಿ ಕಾಡುಗಿರಿಯ ಗೌಡನ ಬಳಿಗೆ ಬೀರಣ್ಣ ಬಂದನು. ಅಲ್ಲೆ ೧೨ ವರ್ಷಗಳು ಇದ್ದು ಕುರಿಗಳನ್ನು ಕಾಯತೊಡಗಿದನು. ಕಾಡಗಿರಿಯ ಬಿಟ್ಟು ಗೌಡಗಿರಿಗೆ ಬಂದು ಅಲ್ಲೆ ಕುರಿಗಳನ್ನು ಕಾಯುತ್ತ ಹುತ್ತಿನ ಬಳಿ ತಪಸ್ಸಿಗೆ ಕುಳಿತ. ಹುತ್ತೆ ಬೀರಪ್ಪನ ಮೇಲೆ ಬೆಳೆಯಿತು. ಇದು ಶಿವನಿಗೆ ಗೊತ್ತಾಗಿ ಕೈಲಾಸದಿಂದ ಬಂದು ಹುತ್ತ ಮುಟ್ಟಲು ಹುತ್ತೆಲ್ಲಾ ಹೋಗಿ ಬೀರಪ್ಪನು ಕಾಣಿಸಿದ. ಜಟಾಧಾರಿಯಾದ ಬೀಪ್ಪನನ್ನು ಶಿವ ಏನೆಂದು ಕೇಳಿದಾಗ ಬೀರಪ್ಪ ನನಗೆ ಸರಿಜೋಡಿಯಾದ ಶಿಷ್ಯನನ್ನು ಕೊಡಬೇಕೆಂದು ತಿಳಿಸಿದ. ಮೂಡಲದಿಕ್ಕಿನಲ್ಲಿ ಜುಂಜ್ಯೋತಿ ಮಕ್ಕಳಾದ ಜಕ್ಕಪ್ಪ-ಮಾಳಪ್ಪ ೧೨೦೦ ದಂಡಿನೊಂದಿಗೆ ಇರವರು. ಕೆಂಪಕುದುರೆ, ಕೆಂಪುನಿಶಾನೆವುಳ್ಳವನೆ ಜಕ್ಕಪ್ಪ ಬಿಳಿಕುದುರೆ. ಹಸಿರು ನಿಶಾನೆ ವುಳ್ಳವನೆ ಮಾಳಪ್ಪನು, ಮಾಳಪ್ಪನು ತಕ್ಕ ಶಿಷ್ಯನಾಗುವನೆಂದು ಜಲಮಾಯ ಕೆರೆಯ ಮೇಲೆ ಡೋಣ ಕೆರೆಯಕೆಳಗೆ ಯಕ್ಕಿಯ ಗಿಡದ ಜನ ಅಲ್ಲಿ ಅವರು ಬೇಟೆಗೆ ಬರುವರು. ನೀನು ಗಂಡು ಎರಳಿಯಾಗಿ ಹೋಗು. ನಿನ್ನನ್ನು ನೋಡಿ ಮಾಳೆಪ್ಪ ಬೆನ್ನು ಹತ್ತಿ ಬರವನೆಂದು ಶಿವನು ಹೇಳಿ ಮಾಡಬೇಕಾದ ಮಾಯದಾಟ ತಿಳಿಸಿ ಮಾಯವಾದ.

ಇದರುತೆ ಬೀರಪ್ಪ ಮಾಡಿದಾಗ ಮಾಳಪ್ಪ ಬೇಟೆಯಾಡಲು ಹೋದ. ಬೀರಪ್ಪ ಪಕ್ಷಿಯಾಗಿ ಕೆರೆಗೆ ಹಾರಿದ. ಅದರ ಹಿಂದೆ ಮಾಳಪ್ಪ ಹಾರಿದ. ಪಾತಾಳದಲ್ಲಿ ಬೀರಪ್ಪ ನಿಜರೂಪ ತಾಳಿದ. ಇದನ್ನು ನೋಡಿ ಮಾಳಪ್ಪ ಗುರುವಿಗೆ ವಹಿಇಸದ. ಇತ್ತ ಜಕ್ಕಪ್ಪ ಮೂರು ದಿನಗಳ ನಂತರ ತನ್ನ ಮನೆಗೆ ಹೋದರು. ತಾಯಿ ಮಾಳಿಂಗರಾಯ ಬರದಿದ್ದನ್ನು ಕಂಡ ವಿಚಾರ ಮಾಡಿದಾಗ ನಡೆದ ಸಂಗತಿಯೆಲ್ಲ ತಿಳಿಸುವನು. ಹನ್ನೆರಡುನೂರು ದಂಡಿಗೆ ಊಟ ಮಾಡಿಸಬೇಕೆಂದು ತಿಳಿಸಿದಾಗ ಊಟದ ವ್ಯವಸ್ಥೆ ಮಾಡಲಾಯಿತು. ಆ ವೇಳೆಗೆ ಕೆರೆಯ ಒಳಗಿನಿಂದ ಗುರುವಿನ ಕೈಹಿಡಿದುಕೊಂಡು ಮಾಳಪ್ಪ ಬರುವನು. 'ಶಿವನೇ' ನಮ್ಮಯ ದೇವರು ಬಂದಾರ ಬನ್ನಿರೆ ಎಂದು ಎಲ್ಲಾರು ಸಂತಸಪಡುವರು.

### ಲಿಂಗ ಬೀರಣ್ಣ ದೇವರು ಜಡದು ಗದ್ದುಗೆ ಏರ‍್ಯಾನ

ಮಾಳಿಂಗರಾಯನು ಗುರುವಿನ ಸಿಡಿಯಾಣದಲ್ಲಿ ಒಂದು ಗುಡಿಯನ್ನು ಕಟ್ಟಿಸುವುದಾಗಿ ಹೇಳುವನು. ಗೌಡಗಿಯಲ್ಲಿ ಕುರಿಗಳು ಜೋರಾದವೆಂದು ಬೀರಪ್ಪ ಮಾಳಿಂಗರಾಯನಿಗೆ ಹೇಳುವನು. ಇಬ್ಬರು ಬಿಜ್ಜಳ ಗುಂತಿಗೆ ಬಂದು ಸಾಲದಾವಣಿ ಹಾಕುವರು. ಬೀರಪ್ಪ-ಮಾಳಿಂಗರಾಯ ಇಬ್ಬರು ಸಿಡಿಯಾಣಕ್ಕೆ ಬರುವರು. ಗುರುವಿಗಾಗಿ ಪಾಯ ಹೊಡೆದು ಗಚ್ಚಿನ ಗುಡಿ ಕಟ್ಟಿಸುವನು. ಲಿಂಗ ಬೀರಣ್ಣ ಗದ್ದುಗಿ ಏರುವನು.

### ಊಟಕ ಹೊಲಿಗಿಣ್ಣೇನ ಆಟಕ ಹುಲಿಮರಿಯೇನ

ಗುರುಬೀರಣ್ಣನ ಗದ್ದುಗೆ ಏರಿದ ನಂತರ ಆತನಿಗೆ ಊಟಕ್ಕೆ ಹುಲಿಗಿಣ್ಣ ಆಟಕೆ ಹುಲಿಮರಿ ತರುವುದಾಗಿ ಮಾಳನು ಪ್ರಯಾಣ ಮಾಡಿದರು. ನಿಂಬರ್ಗಿ ಬೀಮರಾಯನಲ್ಲಿ ಬಂದು ವಿಚಾರಮಾಡಿದಾಗ ಆತ ಹಳಗುಣಕಿ ಬೀಮರಾಯನ್ನಲ್ಲಿ ಹೋಗುವಂತೆ ಹೇಳಿದಾಗ ಆತ ಗಂಗಿ ಮಾಳವ್ವನ ಹತ್ತಿರ ಜಗುಲಿಗಡ್ಡಕ್ಕೆ ಕಳುಹಿಸುವನು. ಅಲ್ಲಿ ಬಂದು ಮಾಳಪ್ಪ ವಿಷಯ ತಿಳಿಸಿದಾಗ, ಮಾಳಮ್ಮ ಗುಡ್ಡದ ಕೆಳಗಿನ ನದಿ ಅಲ್ಲೊಂದು ಗವಿ ಅಲ್ಲಿಗೆ ಮಾಳಪ್ಪನನ್ನು ಕಳುಹಿಸುವರು. ಅಲ್ಲಿ ಮಾಳಪ್ಪ ಹುಲಿಮರಿಗಳನ್ನು ನೋಡುವನು. ಅವು ಇನ್ನೂ ಕಣ್ಣು ಬಿಡದ ಮರಿಗಳು. ಅಲ್ಲೊಂದು ಸರ್ಪ ಬರುತ್ತಿತ್ತು. ಅದಕ್ಕೆ ಭಂಡಾರ ಹಾಕಿದಾಗ ಅದು ದೂರವಾಯಿತು. ಹುಲಿಮರಿಗಳಿಗೆ ಭಂಡಾರ ಹಾಕಿದಾಗ ಅವು ಕಣ್ಣುಬಿಟ್ಟವು. ತಾಯಿ ಹುಲಿ ಬಂದಾಗ ಎಲ್ಲಾ ತಿಳಿಸಿ ತನಗೆ ಹಾಲುಬೇಕೆಂದು

ತಿಳಿಸಿದಾಗ ತಾಯಿ ಹುಲಿ ಹಾಲು ಮತ್ತು ಮರಿಗಳನ್ನು ಬಹುಮಾನವಾಗಿ ನೀಡಿತು. ಅದನ್ನು ಪಡೆದ ಮಾಳಪ್ಪ ಬಂದು ಗುರುವಿಗೆ ಅವು ಸಲ್ಲಿಸಿ ಪೂಜೆಮಾಡಿ ಆರತಿ ಬೆಳಗುವಾಗ ಇದು ಕೈಲಾಸದಲ್ಲಿ ಬೀಳುವುದು. ಪಾರ್ವತಿ ಇದು ಯಾರ ಬೆಳಕೆಂದು ಶಿವನಿಗೆ ಕೇಳಿದಾಗ ಶಿವನು ಬೀಪ್ಪನ ಭಕ್ತನಾದ ಮಾಳಿಂಗರಾಯನ ಬೆಳಕೆಂದು ತಿಳಿಸವನು. ಮಾಳಪ್ಪನನ್ನು ಪರೀಕ್ಷಿಸಲು ಪಾರ್ವತಿ ಬಯಸುವಳು.

**ಶಿವನ ಮಗಳು ಶೀಲವತಿ ಮಾಳನ ತರಲು ಬಂದಾಳ**

ಪಾರ್ವತಿ ಮಗಳು ಶೀಲವತಿ ಮಾಳನನ್ನು ತಾನು ತರುವುದಾಗಿ ಹೊರಟಳು. ಮಾರುವೇಷದಲ್ಲಿ ಮಾಳನ ವಿಚಾರ ಮಾಡಿದಾಗ ಮಾಳನನ್ನು ಒಯ್ಯಲು ಬಂದಿರುವುದಾಗಿ ತಿಳಿಸುವಳು.ಆಗ ಮಾಳ ಪೂಜೆ ಮುಗಿಸಿಕೊಂಡು ಮುಂದಿನ ಮಠಕ್ಕೆ ಹೋದನೆಂದು ತಿಳಿಸಿದ. ಶೀಲವತಿ ಮುಂದಿನ ಮಠಕ್ಕೆ ಹೋಗುವಳು. ಹೀಗೆ ಮಾಳಪ್ಪ ಪರೀಕ್ಷೆ ಮಾಡಿದಾಗ ಒಂಬತ್ತು ಮಠಕ್ಕೆ ಓಡಾಡಿಸಿದ. ಮನದಲ್ಲಿ ಬೀರಪ್ಪನನ್ನು ನೆನೆದ. ಬೀರಪ್ಪನು ನೀನೆ ನನಗೆ ಪೂಜೆ ಮಾಡೆಂದು ಹೇಳಿದ. ಮಾಳಪ್ಪ ಕೊನೆಗೆ ಹನುಮಂತನಿಗೆ ಮೊರೆ ಹೋದ. ಆಗ ಹನುಮಂತ ಶೀಲವತಿಗೆ ಕೊಡುವುದಿಲ್ಲ ಮಾಳಪ್ಪನನ್ನು ಎಂದು ತಿಳಿಸಿದ. ಶೀಲವತಿ ಹನುಮಂತನ ಗುಡಿ ಹತ್ತಿರ ಮಲಗಿದಾಗ ಅವಳ ಮೂಗಿನ ನತ್ತು ತೆಗೆದು ಆಕೆಯ ಉಡಿಚೀಲದಲ್ಲಿ ಇಟ್ಟ. ಮುಖ ತೊಳೆಯುವಾಗ ನತ್ತು ಕಾಣದಿದ್ದು ಕಂಡು ಗಾಬರಿಯಾದ ಶೀಲವಂತಿಗೆ ಉಡಿಚೀಲದಲ್ಲಿದೆಯೆಂದು ತಿಳಿಸಿದ. ಅದನ್ನು ಪರೀಕ್ಷಿಸಿದಾಗ ನತ್ತು ಇತ್ತು. ನತ್ತು ಇಟ್ಟುಕೊಂಡು ತಿರುಗಿನೋಡಿದರೆ ಸ್ವರದ್ರೂಪೆ ಮಾಳಪ್ಪನೆ ಅಲ್ಲಿ ಮಾಳಪ್ಪನಿಗೆ ಶೀಲವಂತಿ ಶರಣಳಾಗಿ ಸಿಡಿಯಾಣದಲ್ಲಿ ನೆನೆಯಲು ಮಾಳಪ್ಪ ತಿಳಿಸಿದಾಗ ಶೀಲವಂತಿ ಹಾಗೆ ಮಾಡಿದಳು.

**ಶಿವನೆ ನಮ್ಮಯ ದೇವರು ಬಂದಾರ ಬನ್ನೀರೆ**

ಶಿವ-ಪಾರ್ವತಿಯರು ವೇಷ ಮರೆಸಿ, ಶಿವನು ರೋಗಿಯ ರೂಪತೊಟ್ಟು ಸಿಡಿಯಾಣಕ್ಕೆ ಬಂದರು. ಪಾರ್ವತಿ ಶಿವನಿಗೆ ಗಾಳಿ ಬೀಸಿದಾಗ ವಾಸೆ ಹರಡಿತು. ಬೀರಪ್ಪನಿಗೆ ತಾಳಲು ಅಸಾಧ್ಯವಾದರೂ ಕೋಪಗೊಂಡ ಬೀರಪ್ಪನನ್ನು ಮಾಳಪ್ಪ ನೋಡಿ ಶಿವಪಾರ್ವತಿಯರನ್ನು ಬೀರಪ್ಪನ ಗುಡಿಗೆ ತಂದು ತನ್ನ ಬಳಿಯಲ್ಲಿರಿಸಿದ, ದೇಹದಾಸೆ ಬಿಟ್ಟು ಬೆನ್ನಲ್ಲಿ ಬೆಳಕೋರಿದ ಶಿವನು ಮಾಳಪ್ಪನ ಕೈಹಿಡಿಯಲು ಪ್ರತಿವರ್ಷ ದೀಪಾವಳಿಗೆ ಶಿವ ಬರಬೇಕೆಂದು ಭಾಷೆ ತೆಗೆದುಕೊಂಡ.

**ಶಿವನಿಗೇನಿ ಮಾಳಿಂಗರಾಯನ ಗುರುವಿನ ಭಾಷೆ ಪಡೆದಾನ**

ಬೀರಪ್ಪ ಮಾಳಿಂಗರಾಯನಿಗೆ ನಗರಬಾವಿ ನೀರನ್ನು ಖಾಸಬಾಗದ ಹೂಗಳನ್ನು ತನ್ನ ಪೂಜೆಗಾಗಿ ಬೇಡುತ್ತಾನೆ. ಮಾಳಿಂಗರಾಯ ಅದರಂತೆ ಮುಂಜಾನೆ ಪೂಜೆ ಭರ್ಜರಿಯಾಗಿ ಮಾಡುತ್ತಾನೆ. ಗಾಂಜಾ ಸೇದಲು ಕೊಟ್ಟು ಕಾಲುಹಿಡಿದು ಕುಳಿತು ಹೀಗೆ ಕೇಳುವನು. ಇಟ್ಟಲ್ಲಿ ಇರಬೇಕು ಕರೆದಲ್ಲಿ ಬರಬೇಕು, ನಿಂತಲ್ಲಿ ನೆರಳಾಗಬೇಕು, ಕುಂತಲ್ಲಿ ಬೆನ್ನಾಕಬೇಕು, ಎಳಗರನಾಗಿ ಬೆನ್ನಿಂದ ಬರಬೇಕ ಎಂತಹ ವೇಳೆ ಬಂದರೂ ಅಂತರಲೆ ಹೋಳಾಗಬೇಕ ಎಂದು ಬೇಡಿಕೊಳ್ಳುತ್ತಾನೆ. ಗುರುಬೀರಪ್ಪ ಗಾಂಜದ ಗುಂಗಿನಲ್ಲಿ ಭಾಷೆ ನೀಡುವನು.

**ಮಾಳಿಂಗ ರಾಯನೋ ತಾಯಿ ಮನ್ನಣೆ ಮನಿಯಾಗ ಕರದಾಳ**

ಬೀರಪ್ಪನು ಇರುವ ಸಿಡಿಯಾಣ ಬಿಟ್ಟು ಹುಲಿಜಂತಿಗೆ ಮಾಳಿಂಗರಾಯನು ಬಂದು ತಾಯಿ ಕಾನಬಾಯಿ ಹೆಂಡತಿ ಈರಮ್ಮನನ್ನು ನೋಡಿದ. ಅವರು ಉಂಡುಮಲಗಿದ್ದರು. ಎಬ್ಬಿಸಿದರೆ ಪಾಪ ಬರುವುದೆಂದು ಮಾಳಿಂಗರಾಯ ಒಂಟಿಕಾಲಿನಲ್ಲಿ ಮನೆಯ ಹೊರಗೆ ನಿಂತನು ಇದನ್ನರಿತ ತುಳಜಭವಾನಿ ತಾಯಿಗೆ ಕನಸು ಬೀಳುವಂತೆ ಮಾಡುವಳು. ಎಚ್ಚರಗೊಂಡ ತಾಯಿ ಬಂದು ಬಾಗಿಲು ತೆಗೆದಾಗ ಮಾಳಿಂಗರಾಯ ತಾಯಿ ಮನೆಯೊಳಗೆ ಬರಮಾಡಿ ಅವನಿಗೆ ಸ್ನಾನ, ಊಟ ಮಾಡಿಸುವಳು. ಗುರು ನೆನೆದು ಐದು ತುತ್ತು ಊಟ ಮಾಡಿ ಮಾಳಿಂಗರಾಯ ತಾಯಿಗೆ ನಮಸ್ಕರಿಸಿ ಊರಿನ ಸಮೃದ್ಧಿ ಬೆಳೆಯಲೆಂದು ಆರ್ಶೀವದಿಸಿ ಹೊರಡುವನು.

### ಸಗುಸಗುತ ಆಡಿದ ಮಾತ ಮಾಳ ಮನಸಿಗ ಹಿಡಿಸಿದಿ ಅಂದಾನ

ಮಾಳಿಂಗರಾಯ ತಾಯಿಯ ಮನೆಯಿಂದ ಬರುವುದನ್ನೆ ಗಮನಿಸಿದ ಗುರುಬೀರಪ್ಪನು ಮೇಲಿನ ಮಾತು ತಿಳಿಸುವನು. ಮಾಳನನ್ನು ತರಲು ತಾನೇ ಕುದ್ದಾಗಿ ಬರುವನು. ಎಲ್ಲಿ ಮಾಳನ ದರ್ಶನವಾಗವುದಿಲ್ಲ. ಕೊನೆಗೆ ಕೈಲಿ ಹೊಡೆದನು. ಮಾಳನ ಗುರುವಿನ ಶಬ್ದಕೇಳಿ ಇಬ್ಬರು ಕೂಡುವರು. ಬೀರಪ್ಪನು ಮಾಳನನ್ನು ಕರೆದಾಗ ಹೂ, ಕಾಯಿ, ಸೀತಾಳ ತರುವುದಾಗಿ ಹೇಳಿದಾಗ ಗುರುಬೇಡವೆಂದು ಹೇಳಿದರೂ ಮಾಳ ಮುಂದೆ ಹೋಗುವನು. ಕ್ರೋಧಗೊಂಡ ಗುರು ಹಿಂದಕ್ಕಾದನು.

### ಗುರುವ ಬೀರಣ್ಣ ದೇವರ ಮಾಳನ ಕಾಡುತಾನೇನ

ಗುರು ಬೀರಣ್ಣ ಮಾಳನು ಹೋಗುವ ದಾರಿಗೆ ಅನೇಕ ಪವಾಡಗಳನ್ನು ಮಾಡುವನು. ಅವುಗಳನ್ನೆಲ್ಲಾ ಗುರು ನಿನ್ನ ಕರುಣಗೆಂದು ಮಾಳ ಮುಂದೆನಡೆದನು. ಆಗ ಗುರು ಅಂಗೈಯಷ್ಟು ಮೋಡವಾಗಿ ಬೋರೆಂಬ ಮಳೆಬರಲಿ, ಕಾರಂಬ ಕತ್ತಲು ಕವಿಯಲಿ ಬೆಬ್ಬುಲಿವನ ನೀರು ತುಂಬಿ ಹರಿಯಲಿ, ಕಾಲಿಟ್ಟರೆ ಕಾಲ ಕಡೆಯಲಿ, ಕೈಯಿಟ್ಟರೆ ಕೈ ಸುಡಲಿ ಎಂದನು. ಮತ್ತು ಸಿಡಿಯಾಣಕ್ಕೆ ಬಂದನು. ಹೀಗೆ ಗುರುಬೀರಣ್ಣ ಹೇಳಿದುದಕ್ಕೆ ಎಲ್ಲಾ ಹಾಗೆ ಹಾಗಲು ಐದು ಮಂದಿ ಹುಡುಗಿಯರು ನೀರನಲ್ಲಿ ಚೆಲ್ಲಾಟವಾಡುವುದನ್ನು ಮಾಳ ಗಮನಿಸಿದ. ಅವರನ್ನೆ ನೋಡುತ್ತ ನಿಂತ. ಅವರು ಅಲಂಕಾರವಾಗಿ ವಿಚಾರ ಮಾಡಿದಾಗ ತನ್ನ ಪರಿಚಯ ಹೇಳಿ ಗುರುವಿಗೆ ಹೂ, ಕಾಯಿ ತರಲು ಬಂದಿರುವುದಾಗಿ ತಿಳಿಸಿದ. ಅವು ನೀಡಿದರೆ ನಿಮ್ಮ ಮದುವೆಗೆ ಕೊಂಬಿನ ಟಗರು ನೀಡುವುದಾಗಿ ತಿಳಿಸಿದ. ತಕ್ಷಣ ಅವರು ಹೋಳಾಗಿ ನಿಂತರು. ಮಾಳ ಎಲ್ಲಾರನ್ನು ನೆನದನು. ಗಂಗೆಗೆ ಭಂಡಾರ ಹಾಕಲು ನೀರು ದಾರಿಬಿಟ್ಟಿತು. ಪಾದಕ್ಕೆ ನೀರು ಹತ್ತಿಲ್ಲದೆ ಪಾರಾಗಿ ಹೋದ ಮತ್ತೆ ಆ ಕಡೆ ಹೋಗಿ ಭಂಡಾರ ಹಾಕಲು ಹೊಳೆ ಮತ್ತೆ ತುಂಬಿ ಹರಿಯಿತು.

### ನಾಗರಬಾವಿ ಸೀತಾಳ ಖಾಸಬಾಗದ ಹೂವ ಮಾಳ ಪಡದಾನ

ಮುಂದೆ ಮೂರು ಹರದಾರಿ ಮೇಲೆ ಧರ್ಮರಾಯನ ಗದ್ದುಗೆ, ಗೀಜಗನಳ್ಳಿಯ ನಾಗರಬಾವಿಗೆ ಖಾಸಬಾಗಗಳು ಧರ್ಮರಾಯನ ಆಳ್ವಿಕೆಗೆ ಸೇರಿದ್ದವು. ಅಲ್ಲಿ ಬಲವಾದ ಕಾವಲಿದೆ. ಅಗಸಿಗೆ ಅರ್ಜುನ, ಖಾಸಬಾಗಕ್ಕೆ ಭೀಮ, ನಾಗರಬಾವಿಗೆ ಏಳಡಿ ಸರ್ಪ, ಏಳುಸುತ್ತನ ಕೋಟೆಗೆ ನಕುಲ, ಸಹದೇವ ಕಾವಲದ್ದಾರೆ. ಆಗ ಮಾಳಿಂಗರಾಯ ಮತ್ತೆ ಗುರುವನ್ನು, ಶಿವನನ್ನು ನೆನೆದು ಮಳೆ ಬರಲೆಂದು ಕೇಳಿಕೊಂಡ. ಕೆಟ್ಟಗಾಳಿ ಬೀಸಿ ಎಲ್ಲಾ ದೀಪ ಆರಿದವು. ಎಲ್ಲಾರು ತಮ್ಮ ಆಶ್ರಯಕ್ಕೆ ಹೊದರು. ಮತ್ತೆ ತಾಯಿ-ತಂದೆಯನ್ನು ಮಾಳಿಂಗ ನೆನೆದ. ಅಗಸಿಬಾಗಿಲು ತೆರೆಯಿತು. ಖಾಸಬಾಗದಲ್ಲಿ ಹೂ ಸಂಗ್ರಹಿಸಿ, ನಾಗರಬಾವಿಯಿಂದ ನೀರು ತುಂಬಿಕೊಳ್ಳುವಾಗ ಏಳಡಿಸರ್ಪ ಬಂದು ವಿಚಾರ ಮಾಡಲು ಮಾಳ ಎಲ್ಲಾ ಹೇಳಿದ. ಸರ್ಪ ನನಗೆ ಕಣ್ಣು ಇಲ್ಲಾ, ಕಣ್ಣು ಬರಿಸು ಎಂದು ಹೇಳಿತು. ಮಾಳಿಂಗ ಹಾಗೆ ಮಾಡಿದ. ಆದ್ರೂ ಮಾಳನನ್ನು ಹಾವು ಕಚ್ಚಲು ಬಂತು. ಮಾಳನು ಹಾವಿನ ನಾಲಿಗೆಯನ್ನು ಸೀಳಿ 'ನಾಗರ ಪಂಚಮಿ' ಹಬ್ಬ ಹೆಣ್ಣುಮಕ್ಕಳು ಹಾಲು ಹಾಕಲಿ ಎಂದು ಗಂಗಿಯ ತರಲು ಬಾವಿಗೆ ಇಳಿದ. ಪಾತಾಳದಲ್ಲಿ ಜಕಣಿಯರಿಗೆ ಭರವಸೆ ನೀಡಿ ನೀರು ತುಂಬಿಕೊಂಡು ಬಂದ.

### ಅಣ್ಣಾ ಧರ್ಮರಾಯನೊ ಮಾಳನ ಬಗಲಿಗೆ ಬಂದಾನ

ಮಾಳ ಎಲ್ಲಾ ತೆಗೆದುಕೊಂಡು ಬರುವುದನ್ನು ಬೀರಪ್ಪನು ಗಮನಿಸಿ ಮತ್ತೆ ಕಾಡಲು ನಿಂತನು. ಪಾಂಡವರಿಗೆ ಎಚ್ಚರ ಮಾಡಿಸಿದ. ಭೀಮನು ನೀನು ಕಳ್ಳನೆಂದು ಗದೆ ಬೀಸಲು ಒಂದು ಗೇಣಿನ ಅಂತರದಲ್ಲಿ ಅದು ನಡೆಯಿತು. ಹರ್ಷಚಕಿತನಾದ ಭೀಮ ಧರ್ಮಕಟ್ಟೆಗೆ ಕರೆದನು. ಭೀಮನು ನಡೆದ ಎಲ್ಲಾ ವಿಚಾರ ತಿಳಿಸಿದ ಹೊತ್ತಿಗೆ ತೆಗೆದು ನೋಡಿದ್ರೆ ಮಾಳ ಭೀಮ ಪಶ್ಚಾತ್ತಾಪ ಪಟ್ಟ ಭೀಮನು ಧರ್ಮಕಟ್ಟೆಯ ನಮಸ್ಕಾರಮಾಡಿ ವಿಚಾರ ತಿಳಿಸಿದ. ಧರ್ಮರಾಯ ಕೈಹಿಡಿದು ಕರೆದು ನಿನಗು ನಿನ್ನ ಗುರುವಿಗೂ ಇದು ಸಲ್ಲಲಿ ಎಂದನು. ಕಟ್ಟೆಯಲ್ಲಿ ಮುತ್ತಿನ ಹಾದಿ ಮಾಡಿ ತಂದು ಕೂರಿಸಿದರು. ಅಲ್ಲಿ ಪಕ್ಕದಲ್ಲಿ ಧರ್ಮರಾಯನು ಕುಳಿತುಕೊಂಡನು.

### ಕಲಿಯ ಕಟ್ಟೆ ಏರ್ಯಾನ ಧರ್ಮ ಕೆಳಗ ಇಳಿದಾನ

ಧರ್ಮರಾಜ ಮಾಳಪ್ಪನಿಗೆ ತನ್ನ ಹಿಂದಿನ ಕಥೆಯನ್ನು ಕೇಳುವನು. ಆದರೆ ಮಾಳಪ್ಪನು ಹೇಳುವುದಿಲ್ಲ. ಆಗ ಧರ್ಮರಾಜನು ನಾನು ಕೇಳಿದ್ದು ನೀನು ಹೇಳಲೆ ಬೇಕೆಂದು ಹಠಮಾಡಿದ. ಹೇಳದೆ ಇದ್ದರೆ ಏಳುನೂರು ಸಿದ್ದರನ್ನು ಬಂದಿಖಾನೆ ಹಾಕಿದ ಹಾಗೆ ನಿನ್ನನ್ನು ಹಾಕುವೆನೆಂದು ತಿಳಿಸಿದ. ಆಗ ಮಾಳಪ್ಪ ಸಿದ್ದರನ್ನು ಬೇಡಿರೆಂದು ಹೇಳಿದ. ಸಿದ್ದರೆಲ್ಲರು ಬಂದು ಮಾಳನನ್ನು ಹರಸುವರು. ಮಾಳಪ್ಪನು ಧರ್ಮರಾಜನಿಗೆ ಹೇಳುತ್ತಾನೆ. ಧರ್ಮದ ಕಟ್ಟೆ ಕರ್ಮದ ಕಟ್ಟೆಯಾಗುತಿದೆ. ಖಾಸಾಬಾಗ ದನದ ಬಜಾರವಾಗುತ್ತದೆ, ಪಟ್ಟಣ ಹುಲ್ಲಿನ ಸಂತೆಯಾಗುತ್ತದೆ. ಕಟುಕರು ಖಂಡ ಕಡಿಯುತ್ತಾರೆ. ಮೂಡಲ ದಿಕ್ಕಿಗೆ ಹೋತಿನ ಗಡ್ಡದವರು, ಗೊಂಡೆದ ಚಪ್ಪಲಿಯವರು, ಕೆಂಪಮೂತಿಯವರು, ಸೂಜಿಯ ಮೋರೆಯವರು, ಮುಸಲರು ಭೂಟಗಾಲಿಲೆ ಧರ್ಮದ ಕಟ್ಟೆ ಏರುತ್ತಾರೆ. ರಥದಲ್ಲಿ ಹಸಿರು ಬಣ್ಣದ ಹಕ್ಕಿ ಗೂಡಕಟ್ಟುತ್ತದೆ. ಕಾಲಮಾಯಿ ಬಂದು ಎಲ್ಲಾ ತನ್ನದೆ ಮಾಡಿಕೊಳ್ಳುವಳು. ಅದಕ್ಕಾಗಿ ಕಲಿಯ ಬಂದರೂ ಧರ್ಮ ಬಿಡಬೇಡಿರಿ ಎಂಬುದು ಮಾಳನ ಮಾತಾಗುತ್ತದೆ.

### ಬಿಜ್ಜಳಂಕ ಬಂದಾಗ ಧರ್ಮದ ನ್ಯಾಯ ಬಂದಾವ

ಧರ್ಮರಾಜನಿಗೆ ಮತ್ತೆ ಹೇಳುತ್ತಾನೆ, ಗೀಜಗನ ಹಳ್ಳಿಗೆ ಬಿಜ್ಜಳಂಕ ಅರಸನಾಗಿ ಬರುತ್ತಾನೆ. ಆಗ ಹೊನ್ನಮ್ಮ ನ್ಯಾಯ ಬೇಡಬಂದಾಗ ಅರಸನ ಮಾತುಗಳು ಅವಳಿಗೆ ಅಸಹ್ಯವಾಗುತ್ತವೆ. ಆದರೆ ಬೇರೆಯವರು ಹಾಗೆ ಮಾಡುತ್ತಾರೆ. ಕರಿಮಾಯಿ ಹೊನ್ನಮ್ಮನ ಬದಲು ಕಾರ್ಯಮಾಡುವಳು ಬಾಟಲಿಯಲ್ಲಿ ಬಂಧಿಯಾದಳು. ಹೊನ್ನಮ್ಮ ಧರ್ಮದಿಂದ ಗೆಲ್ಲುವಳು.

### ಕಲಮಾಯಿಯಿಂದ ಪಾಂಡವರಿಗೆ ವನವಾಸ

ಮಾರಪ್ಪನೆ ಮಾತುಗಳು ಮುಂದುವರೆಸಿ ಪಾಂಡವರು ನಿಮ್ಮನ್ನು ಬಿಜ್ಜಳಂಕ ಊಟಕ್ಕೆ ಕರೆಯುವರು. ಕಲಮಾಯಿ ಇದ್ದ ಬಾಟಲಿ ನಿಮ್ಮ ಜೋಳಿಗೆಗೆ ಹಾಕುತ್ತಾರೆ. ಕೂದಲೆಯ ಸಂದಿನಲ್ಲಿ ಕಲಮಾಯಿ ಹೊರಗೆ ಬಂದು ಸವತೆ ಬಳ್ಳಿ ಬೆಳೆದು ನೀವು ಹೋಗಿ ಹರಿಯುವಂತೆ ಮಾಡಿ ಅರಸರಿಗೆ ದೂರು ನೀಡುವಳು. ನನ್ನು ಐದುಮಕ್ಕಳನ್ನು ಕದ್ದಿದ್ದಾರೆಂದು ಅವರು ನಿಮ್ಮನ್ನು ಪರೀಕ್ಷೆಗಾಗಿ ನಿಮ್ಮ ಸವತೆಕಾಯಿ ಮಕ್ಕಳಾಗಿ ಕಂಡು ನೀವು ವನವಾಸಕ್ಕೆ ಹೋಗುವಂತೆ ಮಾಡುತ್ತದೆ ಎಂದು ಮಾಳ ತಿಳಿಸುತ್ತಾನೆ.

### ಹೂಗಾರ ಅಂಬಣ್ಣಗೆ ಮಕ್ಕಳ ವರವ ಕೊಟ್ಟಾನ

ಮಾಳಪ್ಪ ಗೀಜಗನಹಳ್ಳಿ ದಾಟಬೇಕೆಂದಿದ್ದಾಗ ಹೂಗಾರ ಅಂಬಣ್ಣ ಬಂದು ಮಾಳನಿಗೆ ನಮಸ್ಕಾರ ಮಾಡಿ ನನ್ನ ಮನೆಗೆ ಬನ್ನಿರೆಂದು ಕರೆದೊಯ್ಯುವನು. ವರ್ಷಕ್ಕೊಮ್ಮೆ ಗಂಡು ಮಗುವಾಗುತ್ತದೆ. ಆದರೆ ೧೨ ನೇ ದಿನದಲ್ಲಿ ಭೂತಕಾರಿ ಬಂದು ಮಗುವನ್ನು ನುಂಗಿ ಹಾಕುತ್ತದೆ. ನಾನೇನು ಮಾಡಲೆಂದು ಹೇಳುವನು ಮಾಳ. ತೊಟ್ಟಿಲ ಕೆಳಗೆ ಕುಳಿತು ನೋಡಿದಾಗ ಭೂತಕಾರಿ ಹೊಸ್ತಿಲಲ್ಲಿ ಇರುತ್ತದೆ. ಅದಕ್ಕೆ ಗುರು ನೆನೆದು ಭಂಡಾರ ಹಾಕುವನು. ಅದು ಮಾಳ ಹೇಳಿದಂತೆ ಕೇಳಿಕೊಂಡು ಇರುತ್ತದೆ. ಮಾಳ ಹೂವಿನ ಅಂಬಣ್ಣನಿಗೆ ನಿನಗೆ ಒಂದೇ ಗಂಡು ಸಂತತಿ ಇರುತ್ತದೆ ಎಂದು ತಿಳಿಸುವನು. ಅಂಬಣ್ಣ ಭಕ್ತಿಯಿಂದ ನೆನೆದು ದೀಪಾವಳಿಗೆ ನಿನಗೆ ಹರಕೆ ಕಟ್ಟುವುದಾಗಿ ತಿಳಿಸುವನು. ಮಾಳ ಮುಂದೆ ನಡೆಯುತ್ತಾನೆ.

### ಗಂಧಕಸ್ತೂರಿ ಮಾಡುವೇನ ಕಲಕ ಮಾಡಿ ಬಿಟ್ಟಾನ

ಮಾಳಪ್ಪನು ಹಾಗೆ ಮುಂದೆ ಬರುವಾಗ ಗಂಧ-ಕಸ್ತೂರಿ ಮಡುವಿಗೆ ಬಂದನು. ಸ್ನಾನಮಾಡಿದನು. ಕಾವಲುಗಾರ ಸ್ನಾನ ಹೇಗೆ ಮಾಡಿದೆಂದು ಕೇಳಿದಾಗ ಮಾಳ ಸುಮ್ಮನೆ ನಿಂತನು. ಕಾವಲುಗಾರ ಮಾಳನನ್ನು ಕರೆದೊಯ್ದು ಜಕಣೆಯರು ಬಿಸಿ ನೀರು ಸ್ನಾನ ಮಾಡಿಸಿ ಕಳುಹಿಸಿದರು ಎಲ್ಲಾ ವಿಚಾರ ಮಾಡಿ

**ಲಿಂಗ ಬೀರಣ್ಣ ದೇವರ ಗದ್ದುಗಿ ಕುಂತಾನ**

ಮುಂದೆ ನಡೆದು ಬಂದ ಮಾಳನನ್ನು ಗುರು ಬರುವುದನ್ನು ಕಂಡನು. ಅವನು ಅಲ್ಲಿಗೆ ಬರುವಷ್ಟರಲ್ಲಿ ಮಾಯದ ಮರ ಬೆಳೆಸಿದನು. ಗಚ್ಚಿನ ಮನೆ ಬಿಟ್ಟು ಹೊಲದ ಹುತ್ತಿನಲ್ಲಿ ಹಾವಾದ ಗುರು ಬೀರಣ್ಣ ಮಾಳ ತುಂಬಿದ ಹಳ್ಳ ದಾಟಿ ಬಂದು ಗುಡಿಯೆಲ್ಲ ಸ್ವಚ್ಛಗೊಳಿಸಿ ಗುರು ಬಾರದಿದ್ದುದನ್ನು ನೋಡಿ ನಾನು ಮನೆ, ಹೆಂಡ್ತಿ ಎಲ್ಲಾ ಬಿಟ್ಟೆ, ಗುರು ನನ್ನ ಬಿಟ್ಟನೆಂದು ಕೋಪಗೊಂಡನು. ಇದನ್ನರಿತ ಗುರು ಗುಡಿಯಲ್ಲಿ ಬಂದನು. ಮಾಳಿಂಗನು ಗುರುವನ್ನು ಗದ್ದುಗೆ ಮೇಲೆ ಕೂಡ್ರಿಸಿ ಪೂಜೆ ಮುಗಿಸಿದನು.

**ಏ...ನಮ್ಮವ್ವ ಈರಮ್ಮ ಐಕ್ಯನಾಗುತಾಳೇನ**

ಗುರುವಿನ ಪೂಜೆ ಮಾಡುತ್ತ ಮಾಳಪ್ಪ ತನ್ನ ನಾಲ್ಕು ಮಕ್ಕಳ ಜೊತೆ ಬಿಜ್ಜಳಗುಂತಿಯಲ್ಲಿದ್ದನು. ಇತ್ತ ಹುಲಜಂತಿಯಲ್ಲಿ ಮಾಳನ ಹೆಂಡತಿ ಈರಮ್ಮ ಮುಂಜಾನೆ ಎದ್ದು ನೀರಿಗೆ ಹೋದಳು. ನೀರು ಕುಡಿದು ಮನೆಗೆ ಬಂದು ಅಡಿಗೆ ಮಾಡುತ್ತ ಕುಳಿತಳು. ಇದು ಮಾಳನಿಗೆ ಅರಿವಾಯಿತು. ಊರಿಗೆ ಬಂದನು. ಮಾವ ವಿಷಯ ತಿಳಿಸಿದ. ಈರಮ್ಮ ಮಾಳನನ್ನು ನೋಡಿ ಅಲ್ಲಿ ಐಕ್ಯವಾದಳು. ನಾಲ್ಕು ಮಕ್ಕಳ ಜೊತೆ ಮಾಳಿಂಗರಾಯನು ಬಿಜ್ಜಳಗಂತಿಯಲ್ಲಿ ಇದ್ದನು. ಬೀರಪ್ಪನು ತನಗೆ ನಿಮ್ಮ ಮಗನೊಬ್ಬನನ್ನು ಬಿಡಲು ಒತ್ತಾಯಿಸಿದನು. ಮಾಳಿಂಗರಾಯ ಯಾವ ಮಗನನ್ನು ಬಿಡುವುದು ಯೋಚಿಸುತ್ತಾ ಕುಳಿತನು.

**೨.೧೧ ಡಂಕನಾಡ ದೈಗೊಂಡನ ವೃತ್ತಾಂತ**

**ದೈಗೊಂಡನ ಹೊಸ್ತಲದೊಳಗ ಕಲ್ಮಾಯಿ ಕಿಡಿನಾಲಿಟ್ಟಾಳ**

ಡಂಕನಾಡ ದೈಗೊಂಡ ಅತ್ಯಂತ ಶ್ರೀಮಂತ, ಆದರೆ ದಾನ ಧರ್ಮ ಎಂಬುದು ಮಾತ್ರ ಇರಲಿಲ್ಲ. ಆದ್ದರಿಂದ ಕಲ್ಮಾಯಿ ಇವನ ಮನೆಗೆ ಕಿಡಗಾಲು ಇಟ್ಟಳು. ಎಲ್ಲಾ ದ್ರವ್ಯಕ್ಕಾಗಿ ಹೋಗಿ ಬಿಕ್ಷೆಬೇಡುವ ಸ್ಥಿತಿ ಬಂತು. ಮನೆಹೆಂಡ್ತಿ ಊರಿನ ಮನೆಗೆಲಸ ಮಾಡಿ ತಂದಿದ್ದನ್ನು ತಿನ್ನುವ ಪ್ರಸಂಗ ಬಂತು. ಮನೆದೇವರುಗಳಿಗೆ ಹರಕೆ ಹೊತ್ತರೆ ಕೊಡುವುದು ನಮ್ಮ ಕೈಯಲ್ಲಿಲ್ಲ, ಯಾರ ಕೊಟ್ಟರು ನಮಗೆ ಹರಕೆ ತೀರಿಸೆಂದರು. ದೈಗೊಂಡನು ತನ್ನ ಹೊಲದಲ್ಲಿ ಕೆಲಸ ಮಾಡುವಾಗ ಎಲ್ಲಾ ಜನ ಘರಿಷೆಗೆ ಹೊರಟಿದ್ದರು. ವಿಚಾರ ಮಾಡಿದಾಗ ಮೂಡಲ ದಿಕ್ಕಿನಕಡೆ ಇರುವ ಬೀರಪ್ಪನ ಮಠಕ್ಕೆಂದರು. ತಾನು ಬರುವನೆಂದು ಹೆಂಡತಿಯನ್ನು ಕೇಳಿ ಘರಿಷೆಗೆ ಹೊರಟ. ದಾರಿಯಲ್ಲಿ ರೊಟ್ಟಿ ಬುತ್ತಿ ತಿಂದರು. ಅವು ಕರಗಲಿಲ್ಲ. ಉಳಿದವುಗಳನ್ನು ಹಾಗೆ ಇಟ್ಟುಕೊಂಡು ಘರಿಷೆಗೆ ಹೊರಟನು.

**ಡಂಕನಾಡ ದೈಗೊಂಡಾಗ ಮಾಳಪ್ಪ ವರವ ಕೊಟ್ಟಾನ**

ಎಲ್ಲಾ ಭಕ್ತರು ಬೀರಪ್ಪನಿಗೆ ಹರಕೆ ಸಲ್ಲಿಸಿದಾಗ ಮಾಳಪ್ಪ ಎಲ್ಲರನ್ನು ಬೀಳ್ಕೊಟ್ಟನು. ದೈಗೊಂಡನು ಬೀರಪ್ಪನ ಮುಂದೆ ಒಂಟಿಗಾಲಿನ ಮೇಲೆ ನಿಂತು ಧ್ಯಾನಮಾಡುತ್ತಿದ್ದನು. ಮಾಳಪ್ಪನು ಅವನ ಪರಿಚಯವನ್ನು ಕೇಳಿ ಉದ್ದೇಶವನ್ನು ಅರಿತುಕೊಂಡನು. ದೈಗೊಂಡನು ಹರಕೆಸಲ್ಲಿಸುವುದಾಗಿ ವಚನಕೊಟ್ಟನು.

ಅಲ್ಲಿಂದ ದೈಗೊಂಡ ಬರುತ್ತಿದ್ದರೆ ಒಣಗಿದ ಬಾವಿಗಳು ತುಂಬಿಹರಿದವು. ಬಂಜೆಯರು ಮಕ್ಕಳನ್ನು ಪಡೆದರು. ಊರ ಜನರೆಲ್ಲ ಅವರೆ ದೊಗೊಂಡನ ಹೊಲ ಬಿತ್ತಿಕೊಟ್ಟರು. ಹೊಲದಲ್ಲಿ ಚರಗ ಚೆಲ್ಲಿ ಎರಡು ಹೀರೆಕಾಯಿ ಮನೆಗೊಯ್ದರು. ಅದರಿಂದ ಮುತ್ತು ರತ್ನ ಸುರಿದವು. ಎಲ್ಲಾ ಸಂಪತ್ತು ಬಂದಿದ್ದರಿಂದ ದೈಗೊಂಡ ಹರಕೆ ತೀರಿಸಲು ಸಜ್ಜಾದನು.

**ತನ್ನ ಮನೆಯ ದೇವರಿಗೆ ಹರಕೆ ಮುಟ್ಟಿಸುತಾನೇನ**

ಶ್ರೀಮಂತಿಕೆ ಬಂದಿದ್ದರಿಂದ ಬೀರಪ್ಪ ಮತ್ತು ಮಾಳಿಂಗರಾಯನನ್ನು ಮರೆತು ಎಲ್ಲಾ ಮನೆ ದೇವರುಗಳಿಗೆ ಹರಕೆ ಮುಟ್ಟಿಸಲು ಮುಂದಾದನು. ಎಲ್ಲಾ ಮನೆದೇವರುಗಳಿಗೆ ತನ್ನಿಚ್ಛೆಯಂತೆ ಹರಕೆ ಮುಟ್ಟಿಸಿ ದೈಗೊಂಡನು ಬಂದನು.

### ಶಿವಗೇನಿ ಮಾಳಿಂಗರಾಯನ ಎದಿಯ ಹಿಡಿದು ದಬ್ಯಾರ

ಡಂಕನಾಡ ದೈಗೊಂಡನು ಬೀರಪ್ಪದೇವರನ್ನು, ಮಾಳಿಂಗರಾಯನನ್ನು ಮರೆತು ತನ್ನ ಮನೆದೇವರುಗಳಿಗೆ ಹರಕೆ ಮುಟ್ಟಿಸಿದ್ದಕ್ಕಾಗಿ ಬೀರಪ್ಪ ಮಾಳನ ಮುಂದೆ ಅಪೇಕ್ಷಿಸುತ್ತಾನೆ. ದೈಗೊಂಡನು ತನ್ನ ಊರಿಗೆ ಬಿಗಿ ಕಾವಲು ಪಡೆ ನೇಮಿಸುತ್ತಾನೆ. ಅಲ್ಲದೆ ಲಿಂಗಕಟ್ಟಿದವರನ್ನು ಮಾತ್ರ ಬರುವಂತೆ ಆಜ್ಞೆಮಾಡುತ್ತಾನೆ. ಮಾಳ ಬೀರದೇವರ ಅಪ್ಪಣೆ ಪಡೆದು ಡಂಕನಾಡಿಗೆ ಬರುತ್ತಾನೆ. ಸೈನಿಕರು ಮಾಳನನ್ನು ಲಿಂಗಕಟ್ಟಿಲ್ಲವೆಂದು ಒಳಗೆ ಬಿಡುವುದಿಲ್ಲ. ಮಾಯದಿಂದ ಮಾಳ ದೈಗೊಂಡನು ಇರುವ ಸ್ಥಳಕ್ಕೆ ಬರುತ್ತಾನೆ. ಆದರೆ ಆತ ಅವನನ್ನು ಹಿಂಬಾಲಿಸುತ್ತಾನೆ. ಅಷ್ಟರಲ್ಲಿ ಬೀರನ ಮಾಯೆಯಿಂದ ದೈಗೊಂಡನ ಎದೆಗೆ ಮುಳ್ಳು, ಡಬ್ಬಣ ಚುಚ್ಚಿದಂತಾಗಲು ಅವನ ತಾಪ ಕಂಡು ಅವನ ಹೆಂಡತಿ ತಿಳಿದುಕೊಂಡು ಬೀರದೇವರಿಗೆ ಹರಕೆ ಕಟ್ಟುತ್ತಾಳೆ. ಹೀಗೆ ಮಾಳನು ಬೀರದೇವರ ಮಠಕ್ಕೆ ಬಂದು ಒಂಬತ್ತು ಮರಗಳಿಗೆ ಹರಕೆ ಮುಟ್ಟಿಸುತ್ತಾನೆ.

### ಡಂಕನಾಡ ದೈಗೊಂಡನ ದಂಡ ತಯ್ಯಾರ ಮಾಡ್ಯಾನ

ದೈಗೊಂಡನು ಹನ್ನೆರಡುನೂರು ದಂಡಿಗೆ ತಯ್ಯಾರ ಮಾಡಿ ಕ್ಯಾಣಗನೂರು ಮಠಕ್ಕೆ ಘರಿಷೆಕಟ್ಟಿಕೊಂಡು ಬಂದರು. ಆದರೆ ಮಾಳಿಂಗರಾಯ ಕೈಯಲ್ಲಿ ಸಿಕ್ಕರೆ ಬಿಡಬಾರದೆಂದು ದಂಡಿಗೆ ತಾಕೀತು ಮಾಡಿದನು. ಪೂಜಾರಿಕೆ ಮಾಳನು ಬಿಜ್ಜಳಿಗಂತಿಯಲ್ಲಿರುವನೆಂದು ತಿಳಿದು ಅಲ್ಲಿಗೆ ಬಂದನು. ಅಲ್ಲಿ ಕುರಿಕಾಯುತ್ತಿದ್ದ ತನ್ನ ನಾಲ್ಕು ಮಕ್ಕಳೊಂದಿಗೆ ಮಾಳಪ್ಪ ಸ್ಯಾಮಣ್ಣನಿಗೆ ಭೇಟಿಯಾದನು.

### ಕ್ಯಾಣಗನೂರು ಮಠಕ ಮಾಳ ಬರುವುತಾನೇನ

ಕಂಟೆಶಿರ ಕ್ಯಾಮಣ್ಣನಿಂದ ಕಡಿಹುಟ್ಟಕಣ ಮುತ್ಯಾ ಈಳ್ಯಾ ಪಡೆದು ತರುತ್ತಾನೆ. ಭಜನೆ ಮೇಳದೊಂದಿಗೆ ಮಾಳಪ್ಪ ಹೊರಟು ಮರಿಯಚಿಕ್ಕಳ್ಳಿಗೆ ಬಂದು ಅಲ್ಲಿ ಭಕ್ತೆಯ ಮನೆಯಲ್ಲಿ ಊಟಮಾಡಿ ಮಾಳ ಮುಂದೆ ಹೊರಡುತ್ತಾನೆ. ಅಂಬಿಗನ ಸಹಾಯದಿಂದ ಹಿರೆ ಹೊಳೆದಾಟುತ್ತಾನೆ. ದಾಟುವಾಗ ನೀರು ಕಾಲಿಗೆ ಹತ್ತದಂತೆ ಕಂಬಳಿ ಹಾಸಿ ಕಡೆಗಾಗುತ್ತಾನೆ. ಜೊತೆಯವರು ಅಂಬಿಗನ ಸಹಾಯದಿಂದ ಹೊಳೆದಾಟುತ್ತಾನೆ.

### ಡಂಕನಾಡ ದೈಗೊಂಡ ನಾನೇ ಸೋತಿನಂದಿದ್ದ

ಮಾಳಿಂಗರಾಯ ಕ್ಯಾಣಗನೂರು ಮಠಕ್ಕೆ ಬಂದು ಮಠದ ಬಾಗಿಲುಗಳನ್ನು ತೆರೆದನು. ದೈಗೊಂಡನು ಬಾವಿಯಲ್ಲಿ ವಿಷ ಬೆರೆಸಿದ್ದನು. ಮಾಳನು ಅವೆಲ್ಲವನ್ನು ಗೆದ್ದನು. ಭಕ್ತನೊಬ್ಬ ಬೀರಪ್ಪನಿಗೆ ಬುತ್ತಿತೆಗೆದುಕೊಂಡು ಹೋಗುತ್ತಿದ್ದನು. ಮಾಳ ಅದನ್ನು ಕೇಳಿದಾಗ ಅವನು ನೀಡಲಿಲ್ಲ. ಬೀರಪ್ಪನಲ್ಲಿ ಬಿಚ್ಚಿದಾಗ ಬುತ್ತಿಯೆಲ್ಲಾ ಹುಳುಗಳಾಗಿ ಮಾರ್ಪಟ್ಟಿತ್ತು. ಬೀರಪ್ಪನು ದಾರಿಯಲ್ಲಿ ಯಾರಾದರೂ ಈ ಬುತ್ತಿ ಬಯಸಿದ್ದರೇ ಎಂದು ಕೇಳಿದಾಗ ಭಕ್ತ ಹೌದೆಂದನು. ಆತನೇ ಮಾಳಿಂಗರಾಯ ಅವನಿಗಿಲ್ಲದ ಊಟ ನನಗೆ ಬೇಡವೆಂದನು ಬೀರಪ್ಪ. ನಂತರ ಭಕ್ತನು ದೈಗೊಂಡನನ್ನು ಎಲ್ಲರು ಸೇರಿ ಮಾಳನನ್ನು ಕರೆತರಲು ಹೋದರು. ಮಾಳನನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ತಂದು ದೈಗೊಂಡ ಮತ್ತು ಭಕ್ತರೆಲ್ಲರು ಸೋತ ವಿಷಯ ತಿಳಿಸಿದರು. ಮಾಳ ಮತ್ತೆ ವಿಷದ ಬಾವಿಗೆ ಜಿಗಿದು ಹೂಗಳನ್ನು ತಂದು ಬೀರಪ್ಪನಿಗೆ ಪೂಜೆ ಸಲ್ಲಿಸಿದನು.

## ೨.೧೨ ಅಮೋಘಸಿದ್ಧನ ವೃತ್ತಾಂತ

ಯೋಗಿ ಸಿದ್ಧನು ಕೈಲಾಸದಲ್ಲಿ ಶಿವನ ಪೂಜೆ ಮಾಡುತ್ತ ವಾಸವಾಗಿದ್ದನು. ಆತನಿಗೆ ತನ್ನಂತ ಶಿಷ್ಯ ಶಿವನಂತ ಗುರು ಎಲ್ಲಿ ಇಲ್ಲವೆಂಬ ಗರ್ವ ಬಂದಿತು. ಶಿವನು ಮಾಳಿಂಗರಾಯನು ಹೆಚ್ಚಿನ ಶಿಷ್ಯನಿದ್ದಾನೆಂದು ತಿಳಿಸಿದನು. ಅಮೋಘಸಿದ್ಧನು ಮಾಳನನ್ನು ಪರೀಕ್ಷೆಮಾಡಬೇಕೆಂದು ಹಠ ಹಿಡಿದನು. ಶಿವನು ತನ್ನ ಜೊತೆಯಲ್ಲಿರಬೇಕೆಂದು ಅದರಂತೆ ಶಿವನು ಒಪ್ಪಿ ಇಬ್ಬರು ಕೂಡಿ ಭೂಲೋಕಕ್ಕೆ ಬಂದರು. ದುಕಣಪುರಕ್ಕೆ ಬಂದು ಶಿವ ಮಾಯವಾದನು.

### ಯೋಗಿ ಅಮೋಘುಸಿದ್ಧನು ನಾನೇ ಸೋತೆನೆಂದು ಅಂದಾನ

ಅಮೋಘುಸಿದ್ಧನು ಮುತ್ತುಗಾರನಾಗಿ ಹುಲಿಜಂತಿಗೆ ಬಂದನು. ಇದನ್ನು ತನ್ನ ಶಕ್ತಿಯಿಂದ ಅರಿತುಕೊಂಡ ಮಾಳಪ್ಪ ಎದುರಾಗಿ ಬರಮಾಡಿಕೊಂಡನು. ಪರಿಚಯ ತಿಳಿದುಕೊಂಡು ಇಬ್ಬರ ನಡುವೆ ಸ್ಪರ್ಧೆಯೇ ನಡೆಯಿತು. ಆದರೆ ಇದರಲ್ಲಿ ಮಾಳನೇ ಗೆದ್ದನು. ಯೋಗಿ ತನ್ನ ಸೋಲು ಒಪ್ಪಿಕೊಂಡನು. ತನ್ನಲ್ಲಿನ ವಿದ್ಯೆಯನ್ನು ಮಾಳನಿಗೆ ಧಾರೆಯೆರೆದನು. ನಂತರ ಯೋಗಿ ಮಾಳ ಮನೆಗೆ ಹೋಗಿ ಊಟಮಾಡಿ ಮಾಳನಿಂದ ಯೋಗಿ ಐದು ಕುರಿ ಬೇಡಿದ. ಮಾಳ ಅದರಂತೆ ಜಕ್ಕಣ್ಣನಿಗೆ ಕೊಡಲು ಹೇಳಿದ ರಾತ್ರಿ ಕುರಿಗಳೆಲ್ಲ ಸತ್ತವು. ಯೋಗಿ ಗಾಬರಿಯಾಗಿ ಕೊಟ್ಟು ಕೊಡದಂತೆಯಾಯಿತೆಂದು ಬರಿಗೈಯಲ್ಲಿ ಹೊರಟ. ಅಲ್ಲಿ ಭೂತಾಳಸಿದ್ಧನೊಂದಿಗೆ ತನ್ನ ಪರಿಸ್ಥಿತಿ ತಿಳಿಸಿದ. ಹೇಗೆ ಮಾಡಬೇಕೆಂದು ಆಲೋಚಿಸಿದನು.

### ಯೋಗಿ ಅಮ್ಮುಗಿ ಸಿದ್ದನೆ ಕಲ್ಯಾಣಕ ಹೋಗುತಾನೇನ

ಅಮೋಘುಸಿದ್ಧನು ಮತ್ತು ಭೂತಾಳಸಿದ್ಧನು ಕೂಡಿ ಕಲ್ಯಾಣಕೆ ಹೊರಟರ. ನಡುವಟ್ಟಿ ಊರಿನ ಅರಸ ನಾಗರಾಯ ಕರಕಟ್ಟಿಸುತ್ತಿದ್ದನು. ಅದು ಆರುತಿಂಗಳಿಗೊಮ್ಮೆ ಬೀಳುತ್ತಿತ್ತು. ಆತ ಅಮೋಘುಸಿದ್ಧನ ಕಾರಣಕೇಳಲು ಬರುವುದಾಗಿ ಹೇಳುವುನೆಂದು ಹೊರಟರು.

### ೨.೧೩ ಮಳಸಿದ್ಧಪನ ಜನನ

ಕುಂಬಾರ ಗುಂಡಯ್ಯನಿಗೆ ಮಕ್ಕಳಿರಲಿಲ್ಲ. ಅವರು ಅಮೋಘುಸಿದ್ಧನಲ್ಲಿ ಮಕ್ಕಳನ್ನು ಬೇಡಲು, ಕೊಡುತ್ತೇನೆ ಆದರೆ ಹುಟ್ಟಿದ ಕೂಸನ್ನು ಮುಮ್ಮೆಟ್ಟಿಗುಡ್ಡದಲ್ಲಿ ಬಿಡಬೇಕೆಂದು ತಿಳಿಸಿದ. ಅದಕ್ಕೆ ಗುಂಡಯ್ಯ ಒಪ್ಪಿದ. ಅಮೋಘುಸಿದ್ಧ ಆರ್ಶೀವಾದ ಮಾಡಲಾಗಿ ಗುಂಡಯ್ಯನಿಗೆ ಮಗುವಾಯಿತು. ಅದನ್ನು ಮಳಸಿದ್ಧನೆಂದು ಹೆಸರಿಟ್ಟು ಆತನೇ ಅಮೋಘುಸಿದ್ಧನ ಸಾಕುಮಗನಾದನು.

### ಅಗಸಗಿತ್ತಿಯು ಮಗನ ದೊರಕಿಸಿಕೊಟ್ಟದ್ದು

ಅಗಸರ ನೀಲಮ್ಮ ಊರಬಟ್ಟೆ ಒಗೆಯಲು ಹಳ್ಳಕ್ಕೆ ಹೋದಾಗ ಅವಳ ಹಿಂದೆ ಅವಳ ಮಗನು ಹೋಗಿದ್ದನು. ಇದನ್ನು ಗಮನಿಸಿದ ನೀಲಮ್ಮ ಬಟ್ಟೆ ಒಗೆಯುವಾಗ ಮಗು ನೀರಿನಲ್ಲಿ ಹರಿದುಕೊಂಡು ಹೋಯಿತು. ಮನೆಗೆ ಬಂದು ನೋಡಿದರೆ ಮಗು ಇಲ್ಲ. ಎರಡು ಮೂರು ದಿನಗಳಾದ ಮೇಲೆ ಊರಗೌಡರ ಮನೆಯಲ್ಲಿದ್ದ ಅಮೋಘುಸಿದ್ಧನ ಬೇಡಲು ಹಳ್ಳದಂಡಿಯಲ್ಲಿ ಹೆಸರಿಡಿದು ಕೂಗಿದಾಗ ಮಗು ಬರುತ್ತದೆ ಎಂದು ಹೇಳಲಾಗಿ ಹಾಗೆ ಮಾಡಿದರು. ಮಗು ದೊರೆಯಿತು. ಕಡೆಗೆ ಅಮೋಘು ಸಿದ್ಧನ ಆರ್ಶೀವಾದ ಪಡೆದರು.

### ಅಮೋಘು ಸಿದ್ಧ ಪದ್ಮಾವತಿಯರ ಮದುವೆ

ಅಮೋಘುಸಿದ್ಧ ಮತ್ತು ಭೂತಾಳಸಿದ್ಧ ಕಲ್ಯಾಣದಿಂದ ಹಿಂತಿರುಗಿ ಬರುವಾಗ ನಡುವಟ್ಟಿ ಊರಲ್ಲಿ ಆರುತಿಂಗಳಿಗೊಮ್ಮೆ ಒಡೆಯವ ಕೆರೆ ನಿಲ್ಲಿಸಿದರೆ ಮಗಳ ಕೊಟ್ಟು ಮದುವೆ ಮಾಡುವುದಾಗಿ ನಾಗರಾಯ ತಿಳಿಸಿದ್ದ. ಅಮೋಘುಸಿದ್ಧ ಬಂದು ಹೋದಾಗಿನಿಂದ ಕೆರೆ ಒಡೆದಿರಲಿಲ್ಲ. ಮಗಳು ಅವನೊಂದಿಗೆ ಲಗ್ನ ಮಾಡೆಂದು ಹಠಹಿಡಿದು ಕುಳಿತಳು. ಆದರೆ ತಂದೆ ಅವನು ಮುದುಕ, ಜೋಳಿಗೆ ಇರುವ ಯೋಗಿ ಎಂದಾಗ ಅವಳು ಅವನನ್ನೆ ಮದುವೆಯಾಗುವುದಾಗಿ ತಿಳಿಸುವಳು. ರಾಜ ಒಪ್ಪಿ ಸಿದ್ಧನನ್ನು ಕರಿಸಿ ಧನಧಾನ್ಯ ಕೊಟ್ಟು, ಕಾಳಿಗೊಬ್ಬರಂತೆ ಊಟಕ್ಕೆ ಬರಬೇಕೆಂದು ಆಮಂತ್ರಣವಿತ್ತನು. ಸಿದ್ದನು ತನ್ನ ಪವಾಡದಿಂದ ರಾಜ ಹೆದರಿ ಮಗಳನ್ನು ಮದುವೆ ಮಾಡಿಕಳುಹಿಸಿಕೊಟ್ಟನು.

### ಪದ್ಮಾವತಿಯ ಮಕ್ಕಳ ಸಮಾಚಾರ

ಅಮೋಘು ಸಿದ್ಧ ಗುಡ್ಡಸೇರಿದ್ದರಿಂದ ಪದ್ಮಾವತಿಯ ಗರ್ಭ ಕಟ್ಟಲಿಲ್ಲ. ಇದು ಊರಿನ ಜನ ಅಂದಾಡಿದರು. ಇದು ಕುಂಬಾರ ಮನೆಗೆ ತಲುಪಿತು. ಅವರು ಮರುಳಸಿದ್ಧನನ್ನು ಕರೆತಂದು ಅಮೋಘುಸಿದ್ಧನಲ್ಲಿ ಬಿಟ್ಟರು.

ಮಳಸಿದ್ಧ ಅಲ್ಲೆ ಸಾಕು ಮಗನಾಗಿ ಇದ್ದನು. ಮಳಸಿದ್ಧನು ತಂದೆಯಲ್ಲಿಗೆ ಹೋಗಿ ನನಗೆ ತಂಗಿ ತಮ್ಮಂದಿರಿಲ್ಲವೆಂದು ಕೇಳಿಕೊಂಡನು. ಆಗ ಸಿದ್ಧನು ಐದು ಉತ್ತುತ್ತಿ ಕೊಡಲು ಅವನ್ನು ಮನೆಗೆ ಬಂದು ಪದ್ಮಾವತಿಗೆ ಕೊಡಲು ಅವುಗಳನ್ನು ಜಗಲಿಯಮೇಲಿಟ್ಟು ಅವು ಒಂದು ಹೆಣ್ಣು ನಾಲ್ಕು ಗಂಡುಮಕ್ಕಳಾದವು. ತಾಯಿ ಮಗಳು ಮನೆಯಲ್ಲಿದ್ದರು. ಗಂಡುಮಕ್ಕಳೆಲ್ಲ ಹೋಗಿ ತಂದೆಯಿಂದ ಆಶೀರ್ವಾದ ಪಡೆದು ಬಂದರು. ಸಿದ್ಧನು ಮಳಸಿದ್ಧನ ಬಿಟ್ಟು ಉಳಿದವರಿಗೆ ಗೀಜಗನಹಳ್ಳಿ ರಾಜಕೀಯ ನೋಡಿಕೊಳ್ಳಲು ಕಳುಹಿಸಿದನು. ಆದರೆ ಅವರು ಗೀಜಗನಹಳ್ಳಿ ರಾಜಕೀಯ ನೋಡಿಕೊಳ್ಳುತ್ತಾ ಅಪ್ಪಮಾಡಿದ್ದ ಗಂಟನ್ನು ಮಳಸಿದ್ಧ ಎಲ್ಲಿ ಮೇಯುವನೋ ಎನ್ನುತ್ತ ತಂದೆಯಲ್ಲಿಗೆ ಬಂದರು.

ಇತ್ತ ಮಳಸಿದ್ಧ ತಾಯಿಯ ಊರಿಗೆ ಬಂದು ತಾಯಿಯಿಂದ ಎಲ್ಲಾ ಸಂಪತ್ತು ಗಂಟುಗಟ್ಟಿಕೊಂಡು ಹೊಳೆದಂಡೆಗೆ ಬಂದನು. ಮಕ್ಕಳು ತಂದೆಯಲ್ಲಿಗೆ ಹೋಗಿ ವಿಚಾರಮಾಡಲಾಗಿ ಅವರು ಮನೆಗೆ ಹೋಗಿ ನೋಡಿದಾಗ ಮನೆಯ ಸಂಪತ್ತು ಖಾಲಿಯಾಗಿದೆ. ತಾಯಿಯಿಂದ ಎಲ್ಲಾ ವಿಷಯ ತಿಳಿದುಕೊಂಡು ಬರುವಾಗ ಹೊಳೆಯ ನೀರಿನಲ್ಲಿ ಹೋಗಬೇಡಿ ಹೋದರೆ ನೀವು ಬರುವುದಿಲ್ಲವೆಂದು ತಾಯಿ ಹೇಳುವಳು. ಅವರೆಲ್ಲ ಬಂದು ನೋಡಿದಾಗ ಮಳಸಿದ್ದ ನಡುಗಡ್ಡಿಯಲ್ಲಿದ್ದ ಎಲ್ಲರೂ ಅವನನ್ನು ಬೈದರು. ನಾನು ಬರುವುದಿಲ್ಲ ಬೇಕಾದರೆ ನೀವೆ ನಿಮ್ಮ ಸಂಪತ್ತು ತೆಗೆದುಕೊಳ್ಳಿ ಎಂದ್ಹೇಳಿ ಸಂಪತ್ತು ನೀರಿನಲ್ಲಿ ಬಿಟ್ಟ. ಆದರೆ ಅದು ಅವನು ಸುತ್ತ ಸುತ್ತಿತು. ಅವರು ಗಂಗಿ ನಾಡಿಗೆ ನಡಿ ಎಂದು ಶಾಪವಿತ್ತರು. ಸಂಪತ್ತಿನೊಂದಿಗೆ ಮಳಸಿದ್ಧ ಹೊಳೆದಾಟಿದ, ಮಕ್ಕಳು ಮನೆಗೆ ಬಂದರು. ತಾಯಿ ನಾನೇ ಕೊಟ್ಟಿದ್ದು ಎಂದಾಗ ಅವರು ಮರಳಿ ಹೋದರು.

**ಸೊನ್ನಲಗಿರಿಯ ಕಟಗರಗೇರಿ ಮಳೆಸಿದ್ಧಪ್ಪನ ವಾಸೇನ**

ಮಳಸಿದ್ದನು ಗಂಗಿನಾಡಿಗೆ ಬಂದನು. ಅಲ್ಲಿ ಕಟಗರಗೇರಿಯಲ್ಲಿ ಕೋಣೆಕೇಳಿ ವಾಸವಾದನು. ಸಿದ್ಧರಾಮ ಅಲ್ಲಿ ಕೂಲಿ ನಡೆಸುತ್ತಿದ್ದನು. ಮರಳಸಿದ್ಧನು ಕೂಲಿಗೆ ಹೋದನು. ಎಷ್ಟು ಅಗೆಯುವರೋ ಅಷ್ಟು ಮಣ್ಣಿನರಾಶಿಯಲ್ಲಿ ಕೂಲಿಸಿಗುವಂತೆ ಮಾಡುತ್ತಿದ್ದನು. ಮಳಸಿದ್ಧನ ಬುಟ್ಟಿ ಹಾರಿಹೋಗಿಬರುತ್ತಿತ್ತು. ಸಿದ್ಧರಾಮ ವಿಚಾರಮಾಡಿದಾಗ ತನ್ನೆಲ್ಲ ಪರಿಚಯ ಮಳಸಿದ್ಧ ಮಾಡಿಕೊಟ್ಟನು. ಇರುವ ಸ್ಥಳ ತಿಳಿಸಿದನು.

**೨.೧೩. ಪಾಂಡುರಂಗನ ವೃತ್ತಾಂತ**

**ಪಾಂಡುರಂಗ ಮಾಳಿಂಗರಾಯನಿಂದ ಲಿಂಗ ತರಲು ಬಂದನು**

ಪಾಂಡುರಂಗ ಮಾಳಿಂಗರಾಯನಿಂದ ಲಿಂಗ ತರಬೇಕೆಂದು ಆಲೋಚನೆಮಾಡಿ ಅದಕ್ಕಾಗಿ ಫಂಡರಪುರ ಬಿಟ್ಟು ಮಾಳಿಂಗರಾಯನಲ್ಲಿಗೆ ಹೊರಟನು. ಇದನ್ನರಿತ ಮಾಳನು ಗುರುವನ್ನು ನೆನೆದು ಹಾಲಹಳ್ಳಿಯಲ್ಲಿ ಲಿಂಗವಾಗಿ ನೆನೆಯಲು ಪ್ರಾರ್ಥಿಸಿದ. ಬೀರಪ್ಪನು ಅದಕ್ಕಾಗಿ ಒಪ್ಪಿ ಪಾಂಡುರಂಗನೊಬ್ಬನೆ ಕಳುಹಿಸಿಕೊಡೆಂದು ಹೇಳಿದ. ಅದರಂತೆ ಮಾಳಪ್ಪ ಅವನನ್ನು ಬರಮಾಡಿಕೊಂಡು ಮಾಳನನ್ನು ಲಿಂಗಬೇಡುವನು. ಮಾಳ ಅದಕ್ಕೆ ಒಪ್ಪಿ ಊಟಮಾಡಿಸಿ ಹಾಲಹಳ್ಳದಲ್ಲಿ ಲಿಂಗ ತೋರಿಸುವರು. ಅದನ್ನು ಪಾಂಡುರಂಗನೆ ಹೋಗಿತರಬೇಕೆಂದು ಮಾಳ ತಿಳಿಸಿದ. ನಂತರ ಅದರ ಬಗ್ಗೆ ತಿಳಿಸುವುದಾಗಿ ಹೇಳಿದ. ಪಾಂಡುರಂಗ ಎಷ್ಟು ಪ್ರಯತ್ನ ಪಟ್ಟರೂ ಲಿಂಗ ಸಿಗುವುದಿಲ್ಲ. ಭೂಮಿಯಲುಗಾಡಿದರೂ ಲಿಂಗ ಬರುವುದಿಲ್ಲ. ಆಗ ಪಾಂಡುರಂಗ ಚಿಂತೆ ಮಾಡುತ್ತ ಮಾಳನಿಗೆ ಏನೆಂದು ಹೇಳುವುದೆಂದು ಹರಿವ ಹಳ್ಳದಲ್ಲಿ ಸ್ನಾನಮಾಡಿ ಮೂರುದಿನಗಳವರೆಗೆ ಹಾಗೆಯೇ ಉಪವಾಸ ಪೂಜೆ ಮಾಡುತ್ತ ಕುಳಿತನು.

**ಪಾಂಡುರಂಗ ಧರಿಯ ಧೋಳಗೊಂಡನ ಅನುಗ್ರಹಿಸಿದ್ದು**

ಪಾಂಡುರಂಗ ಮೂರು ದಿನ ಪೂಜೆ ಮಾಡಿ ಸಮೀಪದ ಊರಿಗೆ ಬಂದನು. ಅಲ್ಲಿ ಊರಿನ ಜನರು ಅವನನ್ನು ವಿಚಾರಮಾಡಿದಾಗ ತಾನೊಬ್ಬ ಪರದೇಶಿ ಎಂದನು. ಆ ಊರಿನಲ್ಲಿ ಇಬ್ಬರು ಸಹೋದರರಿದ್ದರು. ಅವನಲ್ಲೊಬ್ಬ ಬಡವ, ಮತ್ತೊಬ್ಬ ಶ್ರೀಮಂತ. ಅವನ ಏಳುಮಂದಿ ಅಕ್ಕತಂಗಿ ಕುರಿಕಾಯುತ್ತಿದ್ದರು. ಒಕ್ಕಲುತನದ, ಆಳುಮಕ್ಕಳು ಹೀಗೆ ಊರಿನ ಜನ ಸಹೋದರರ ಪರಿಚಯ ಮಾಡಿಕೊಟ್ಟರು.

ಪಾಂಡುರಂಗ ಶ್ರೀಮಂತನಾದವನ ಮನೆ ಮುಂದೆ ಬಿಕ್ಷೆ ಬೇಡುತ್ತ ನಿಂತನು. ತಂಗಳನ್ನ ಹಾಕಿದರೆ ನಾಯಿಗಳಿಗೆ, ಆಕಳುಗಳಿಗೆ ಹಾಕು ಎಂದನು. ಅದಕ್ಕೆ ಮನೆಯವನು ಅವು ಕೆಲಸ ಮಾಡುವವು. ನೀನೇನು ಮಾಡುವಿ ಎಂದನು. ಈತ ಹೊಟ್ಟೆ ಬಡಿದುಕೊಂಡ. ಅವನು ರಕ್ತಬರುವಂತೆ ಬಾರಕೋಲಿನಿಂದ ಬಡಿದು ಕತ್ತಿಗೆ ಕೈ ಹಾಕಿ ಹೊರಗೆ ನೂಕಿದನು.

ಪಾಂಡುರಂಗ ಅಲ್ಲಿಂದ ಬಡವನ ಮನೆಗೆ ಬಂದನು. ಬಡವ ಅವನನ್ನು ಪ್ರೀತಿಯಿಂದ ಬರಮಾಡಿಕೊಂಡು ಅವನಿಗೆ ಕ್ಷೇಮವಿಚಾರ ಮಾಡಿದ. ಬಡವ ಅವನ ಹೆಂಡತಿ ಮಗಳು ಮೂರು ಹಿಡಿ ಜೋಳ ಬೀಸಿ ಅಂಬಲಿ ಮಾಡಿ ಕುಡಿಯುತ್ತಿದ್ದರು. ಪಾಂಡುರಂಗ ಮಗುವಿನ ವೇಷಧರಿಸಿದ. ಬಡವ ಅಲ್ಲಿದ್ದ ಮಗ್ಗ ನೇಯುವ ಕಾಯಕ ಮಾಡುತ್ತಿದ್ದ. ಅವನು ಮಗ್ಗಕ್ಕೆ ಕೈಹಾಕಿದ ತಕ್ಷಣವೇ ಕಂಬಳಿಗಳಾದವು. ಅವುಗಳನ್ನು ಮಾರಿಬರಲು ತಿಳಿಸಿದ. ಅದರಂತೆ ತನ್ನ ಮಾಯಾಜಾಲವನ್ನು ಅಲ್ಲಿ ನಡೆಸಿದ. ಬಡವ ಎಲ್ಲರಿಗೂ ಹೊಸ ಬಟ್ಟೆಗಳನ್ನು ತಂದು ಕಂಬಳಿ ನೇಯಲು ಉಣ್ಣೆಗೆ ಹಣ ನೀಡಿ ಬರುವನು. ಎಲ್ಲರೂ ಇವನ ಮಾಯೆ ನೋಡಿ ಮಾನವನಲ್ಲ ದೇವರೆಂದು ಕೊಂಡಾಡಿದರು.

**ಪಾಂಡುರಂಗ ಧೋಳಗೊಂಡನ ಕುರಿಯ ಕಾಯ್ದಾನ**

ಪಾಂಡುರಂಗ ಧೋಳಗೊಂಡನ ಮಗಳಿಗೆ ನೀನು ತುಂಬಾ ದಣಿದಿದ್ದು, ತಲೆಮಾಸಿದೆ. ಅದಕ್ಕಾಗಿ ನಾನು ಕುರಿಕಾಯ್ದುಕೊಂಡು ಬರುವುದಾಗಿ ತಿಳಿಸುವನು. ಅವಳು ಬೇಡವೆಂದು ತಿಳಿಸಿದರೂ ಹಠಮಾಡಿ ಕುರಿಕಾಯಲು ಅಡವಿಗೆ ಹೋದನು. ಅಲ್ಲಿ ಧೋಳಗೊಂಡನ ಅಣ್ಣನ ಏಳು ಹಿಂಡು ಕುರಿಗಳು ಅವನ ಹೆಣ್ಣುಮಕ್ಕಳು ಕಾಯುತ್ತಿದ್ದರು. ಪಾಂಡುರಂಗನ ಏಳುಕುರಿಗಳು ನಂದಣ್ಣನ ಕುರಿಗಳಲ್ಲಿ ಬೆರತವು. ಅವು ಅಲ್ಲಿ ಟಗರಿನ ಜೊತೆ ಕೂಡಿ ಗರ್ಭಧರಿಸಿದವು. ಹೆಣ್ಣುಮಕ್ಕಳು ಪಾಂಡುರಂಗನನ್ನು ಹಾಸ್ಯಮಾಡುತ್ತ ತಮ್ಮ ಕುರಿಗಳನ್ನು ತಂದು ಒಪ್ಪಿಸಿದರು. ನಂತರ ಮನೆಗೆ ಬಂದು ಪಾಂಡುರಂಗ ಗಿಣ್ಣದೂಟ ಮಾಡಿಸಿ ಧೋಳಗೊಂಡನಿಗೆ ಊಟಕ್ಕೆ ಬಡಿಸಿದನು. ಮರುದಿನ ಸಂತೆಗೆ ಉಣ್ಣೆ ತರಲು ಧೋಳಗೊಂಡ ತಿರುಗಿ ನೋಡಲು ಬಿಸಿಲಲ್ಲಿ ನೀನೇಕೆ ಬಂದೆ ಪಾಂಡು ಎಂದಾಗ ನಾನು ಇಲ್ಲೇ ಇರುವೆ, ನೀವು ಹೋಗಿ ಉಣ್ಣೆ ಸಂತೆ ಮಾಡಿ ಎಂದ್ಹೇಳಲು ಧೋಳಗೊಂಡನು ಹೊರಟನು. ಕಡಿಮೆ ಹಣದಲ್ಲಿ ಅಪಾರ ಉಣ್ಣೆ ಬಂತು. ಇದರಿಂದ ಅಪಾರ ಲಾಭಗಳಿಸಿದ ಉಣ್ಣೆಕಂಬಳಿ ಮಾರಾಟದಲ್ಲಿ ಆ ಕಡೆ ಅಣ್ಣ ನಂದಣ್ಣನಿಗೆ ಬಡತನ ಬಂತು. ಕುರಿಗಳೆಲ್ಲ ನರಿಗಳ ಪಾಲಾದವು. ಭೀಕರ ಬಡತನ ಬಂತು. ಪಾಂಡುರಂಗನು ಧೋಳಗೊಂಡನಿಗೆ ಕರಿಯ ಕಲ್ಲಿನ ವಾರಿಯಲ್ಲಿರುವ ಲಿಂಗ ತೋರಿಸಿದ. ಅದಕ್ಕೆ ನಡೆದುಕೊಳ್ಳುವಂತೆ ಸೂಚಿಸಿದ. ಅಲ್ಲಿ ಮಾಳನು ಮತ್ತು ಗುರು ಬೀರಪ್ಪರು ಇದ್ದರು. ಅವರಿಗೆ ಪೂಜೆ ಮಾಡಿ ಮೀಸಲ ಎಡೆ ಮಾಡಿದರು.

**೨.೧೪ ಇತರ ಶರಣರ ವೃತ್ತಾಂತಗಳು**

**ರೇವಣಸಿದ್ದನ ವೃತ್ತಾಂತ**

ರೇವಣಸಿದ್ದನು ಗುರುಶರಣರು ಇವರು ಕಾಡಿನಲ್ಲಿ ವಾಸಿಸುತ್ತಿದ್ದರು. ತಿಂಗಳ ಕಡೆ ಸೋಮವಾರ ಹಾಲಿನ ಬಿಕ್ಷೆಗೆ ಹೊರಟರು. ಹಾರೂರ ಗುಂಡವ್ವನ ಮನಗೆ ಹೋದರು. ಅಲ್ಲಿ ಬಿಕ್ಷೆಬರಲಿಲ್ಲ. ಗುಂಡವ್ವ 'ಕಡಿಗಿ' ಆಗಿದ್ದಳು. ನಂತರ ಕುರುಬರ ಸಿದ್ದವ್ವನ ಮನೆಗೆ ಬಂದು ಬಿಕ್ಷೆ ಬೇಡಿದರು. ಅವಳು ಮನೆಯೆಲ್ಲ ಸ್ವಚ್ಛಗೊಳಿಸಿ ಹಾಲು ಮೀಸಲು ಹಾಲು ಕೊಡುವಳು. ರೇವಣಸಿದ್ದನು ಹಾಲುಸವಿದು ನಿನ್ನ ದೊಡ್ಡಿ ದೊಡ್ಡದಾಗಲಿ ಎಂದು ಹಾರೈಸಿದರು. ಮುಂದೆ ಅವರು ಅಗಸರ ಮಡಿವಾಳನ ಮನೆಗೆ ಬಂದು 'ಕೋರಾನ್ನ ಬಿಕ್ಷೆ' ಎಂದರು. ಅಗಸನ ಹೆಂಡತಿ ಬಟ್ಟೆ ಹೊಗೆಯಲು ಹಳ್ಳಕ್ಕೆ ಹೋಗಿದ್ದಳು. ಮಡಿವಾಳನೊಬ್ಬನೆ ಇದ್ದ. ಗುರು ಶರಣರು ಬಂದರೆಂದು ಮುತ್ತು-ರತ್ನ ತಂದನು. ಗುರು ಶರಣರು ಅವುಗಳನ್ನು ಗಂಜಿಮಾಡಿಕೊಡಬೇಕೆಂದನು. ಅದಕ್ಕೆ ಮಡಿವಾಳನು ಒಪ್ಪಿದನು. ಆದರೆ ಅವುಗಳಿಗೆ ಯಾವ ವಸ್ತು ಉಪಯೋಗಿಸದೆ ಗಂಜಿಮಾಡಬೇಕೆಂದು ಶರಣರು ಹೇಳಿದರು. ಮಡಿವಾಳ ಚಿಂತೆಗೆ ಬಿದ್ದನು. ಹೆಂಡತಿ ಮನೆಗೆ ಬಂದು ಚಿಂತೆಗೆ ಕಾರಣ ಕೇಳಿದನು. ಮಡಿವಾಳಪ್ಪ ಎಲ್ಲಾ

ವಿಚಾರ ತಿಳಿಸಿದನು. ಆಗ ಹೆಂಡತಿ ಮನೆಯೆಲ್ಲಾ ಸ್ವಚ್ಛಗೊಳಿಸಿ ಕಂತಿ ಗಂಡನ ಹೊರಿಗೆ, ತಾನೂ ಬಟ್ಟೆಗಳನ್ನು ತೆಗೆದುಕಂಡು ಹಳ್ಳಕ್ಕೆ ಹೊರಟರು. ಬಟ್ಟೆಗಳನ್ನೆಲ್ಲಾ ಒಗೆದು ಕೊನೆಗೆ ಗಂಡನಿಗೆ ತನ್ನ ಕತ್ತನ್ನು ಕತ್ತರಿಸಲು ಹೇಳಿದಳು. ಮಡಿವಾಳಪ್ಪ ನೀತಿ ಹೇಳಿದರೂ ಅವಳು ಕೇಳಲಿಲ್ಲ. ಕೊನೆಗೆ ಅವಳ ಕುತ್ತಿಗೆ ಕಡಿದು ಅಂಗಾಂಗಳಿಂದ ಕಂತಿಗಳನ್ನು ಗಂಜಿ ಮಾಡಿದನು. ಅದನ್ನು ಗುರು ಶರಣರಿಗೆ ಕೊಡಲು ಹೋದಾಗ ಗಂಡ-ಹೆಂಡತಿ ಇಬ್ಬರೂ ಬಂದು ಕೊಟ್ಟರೆ ಪಡೆಯುವುದಾಗಿ ಹೇಳಿದರು. ಮಡಿವಾಳಪ್ಪ ತಾನು ಮದುವೆಯಾಗಿಲ್ಲವೆಂದು ಸುಳ್ಳುಹೇಳಿದ. ಗುರು ಶರಣರು ಅವುಗಳನ್ನು ಜಗುಲಿಯ ಮೇಲಿಟ್ಟು ನಿನ್ನ ಹೆಂಡತಿಯನ್ನು ಕರೆ ಎಂದಾಗ ಹೆಸರಿಡಿದು ಮಡಿವಾಳ ಕೂಗಿದಾಗ ಹಳ್ಳದಲ್ಲಿ ಅವಳು ಓಗೊಟ್ಟಳು. ನಂತರ ಮನೆಯೊಳಗೆ ಹೀಗೆ ಗಂಡ-ಹೆಂಡತಿ ಸೇರಿದರು. ಗುರು ಶರಣರು ಅವರ ಭಕ್ತಿಗೆ ಮೆಚ್ಚಿ ಏನಾದರೂ ಕೇಳಿ ಎಂದಾಗ ಅವರು ಹರಿಯುವ ಹಳ್ಳದ ನೀರು ಕಣಕ್ಕಿಸು ಜೋಳ, ಮನಿಗೊಂದು ರೊಟ್ಟಿ ಬೇಡಿದರು. ಗುರುಶರಣರು ಆಗಲಿ ಎಂದರು. ದಂಪತಿಗಳು ಮನೆಯೊಳಗೆ ಹೋದರು. ಗುರುಶರಣರು ನಿಂತಲ್ಲೆ ಮಾಯವಾದರು.

### ಹಾಯ್ ಲಿಂಗಮ್ಮನ ವೃತ್ತಾಂತ

ಹಂಗುರಿಗಿ ಗೌಡರ ಮಗಳು ಹಾಯ್ ಲಿಂಗಮ್ಮ ಇವಳನ್ನು ಯಕಚಿಂತಿಯ ದೇಸಾಯರ ಮನೆಗೆ ಕೊಟ್ಟಿದ್ದರು. ಮಾವನು ಒಂದು ದಿನ ಕರೆಯಲು ಬಂದನು. ಲಿಂಗಮ್ಮಳಿಗೆ ಮುತ್ತೈದೆ ಮರ್ಯಾದೆ ಮಾಡಿ ಬೀಳ್ಕೊಟ್ಟರು. ಆಕೆ ಬರುತ್ತಾ ಕಂಡ ದೇವರಿಗೆ ಕೈಮುಗಿಯುತ್ತಾ ಹಿರಿಯರಿಗೆ ಹೇಗೆ ನಡೆಸುವೆ ಕಿರಿಯರಿಗೆ ಹಾಗೆ ನಡೆಸು ಎನ್ನುತ್ತ ಕೈ ಮುಗಿಯುತ್ತ ಹೊರಟಳು. ದಾರಿಯಲ್ಲಿ ಒಂದಂದೂರಿಗೆ ಉಡಿ ಜಗ್ಗುತ್ತಿತ್ತು. ಕೈ ಹಾಕಿದರೆ ಎಣ್ಣೆ ಹಚ್ಚಿದ ಕಲ್ಲು ಇರುತ್ತಿತ್ತು. ಅವುಗಳನ್ನು ಲಿಂಗಗಳೆಂದು ಭಾವಿಸಿ ಊರ ಹೊರಗೆ ಮೂರು ಕಣ್ಣಿನ ಹುತ್ತಿನಲ್ಲಿ ಬಿಡುತ್ತಿದ್ದಳು. ಇಂಥ ಲಿಂಗವಾಹನನೆ ಎಂದು ಹೇಳುತ್ತಿದ್ದಳು. ಎಲ್ಲಾ ಊರಿನಲ್ಲಿ ಗುರುಶರಣರಾಗಿ ಲಿಂಗಗಳಾಗಿ ಎಂದು ಲಿಂಗಗಳನ್ನು ಹುತ್ತಿನಲ್ಲಿ ಬಿಡುತ್ತಿದ್ದಳು. ಊರಿಗೆ ಹೋದ ಮೇಲೆ ರಾತ್ರಿ ಮಲಗಿದಾಗ ಉಡಿಯಲ್ಲಿ ಗಜ್ಜಳಿಯ ಲಿಂಗ ಇದು ಹಾಯ್ಯಾಳದೂರಿನದು ಅದು ಬಂದು ಹೊತ್ತುಹೊರಡುವ ಮುನ್ನ ಮೀಸಲು ಹಾಲು ತಂದು ಕೊಡಬೇಕೆಂದು ಹೇಳಿತು. ಅದರಂತೆ ಆಕೆ ಹಾಗೆ ಮಾಡಿದಳು. ಇದು ಮೂರು ತಿಂಗಳವರೆಗೆ ನಡೆಯಿತು. ಒಂದು ದಿನ ಊರಕಾಯುವವನು ಈಕೆ ರಾತ್ರಿಯಲ್ಲಿ ಹೋಗುವುದು ನೋಡಿ ಮಾವ, ಗಂಡನಿಗೆ ತಿಳಿಸುವನು. ಕೆಟ್ಟ ವಿಚಾರ ತಿಳಿದ ಅವರು ಮರು ದಿನ ರಾತ್ರಿಯಲ್ಲಿ ಅವಳ ಹಿಂದೆ ಆಯುಧ ಹಿಡಿದು ನಡೆದರು. ಆಕೆ ಹುತ್ತಿನಲ್ಲಿ ಹಾಲು ಲಿಂಗಕ್ಕೆ ಕುಡಿಸುವಾಗ ಆಕೆಯನ್ನು ಕೊಲ್ಲಬೇಕೆಂದು ಗಂಡ ಕೈ ಎತ್ತಿದ. ಅವರ ಕೈ ಹಾಗೆ ನಿಂತವು. ಹಿಂತಿರುಗಿ ಆಕೆ ನೋಡಿದಾಗ ಅವರನ್ನು ಕಂಡು ಪಾರುಮಾಡಿದಳು. ಅವರ ಮನೆಯಲ್ಲಿ ಜನ-ದನಗಳಿಗೆ ಕಣ್ಣು ಹೋಗಿದ್ದವು. ಬಂಢಾರ ಹಾಕಿ ಪುನಃ ಕಣ್ಣು ಬರಿಸಿದಳು. ಎಲ್ಲರೂ ತಪ್ಪಾಯಿತೆಂದು ಕಾಲಿಗೆ ಬಿದ್ದು ಕ್ಷಮೆಯಾಚಿಸಿದರು.

### ಗಂಗಿ ಮಾಳಮ್ಮನ ವೃತ್ತಾಂತ

ಮಲ್ಲಯ್ಯನು ಮಣಿಮಲ್ಲಾಸುರನೆಂಬ ರಾಕ್ಷಸನನ್ನು ಸಂಹಾರ ಮಾಡಲು ಭೂಮಿಗೆ ಬಂದನು. ತನ್ನಲ್ಲಿ ಭಂಡಾರವಿರಲಿಲ್ಲ. ಗಂಗಿ ಮಾಳಮ್ಮನಲ್ಲಿ ಭಂಡಾರ ದೊರೆಯುವುದೆಂದು ಭಾವಿಸಿ ಅಣ್ಣಿಗೇರಿಗೆ ಬಂದು ಬಳೆಯ ವ್ಯಾಪಾರವಿಟ್ಟನು. ಊರಿನ ನಾರಿಯರೆಲ್ಲ ಬಳೆ ಇರಿಸಿಕೊಂಡು ಹಿರಿಯ ಕುರುಬನ ಮನೆಯ ಮುಂದೆ ಹೋದರು. ಇದನ್ನು ಗಮನಿಸಿದ ಗಂಗಿಮಾಳಮ್ಮ ಕೈಯಲ್ಲಿ ತಂಬಿಗೆ ಹಿಡಿದು ಬಾವಿಕಡೆಗೆ ಬಂದಳು. ಆಕೆ ಮಲ್ಲಯ್ಯನನ್ನು ನೋಡಿ ಮನಸೋತಳು. ಆತನನ್ನು ಮಾತನಾಡಿಸಿ ಎಲ್ಲಾ ವಿಚಾರ ಅರಿತಳು. ಭಂಡಾರ ಕೊಡುವುದಾಗಿ ಮತ್ತು ತಾನು ತನ್ನ ಜೊತೆಯಲ್ಲಿ ಬರುವುದಾಗಿ ತಿಳಿಸಿದಳು. ಅಷ್ಟರಲ್ಲಿ ಗಂಗಿ ಮಾಳಮ್ಮನ ತಾಯಿ ಹುಡುಕಲು ಬಂದಳು. ವಿಚಾರ ಅಂತ ಮೈಲಾರಿ ಮಲ್ಲಯ್ಯ ಮತ್ತೆ ಬಾ ಎಂದ್ಹೇಳಿ ಕಳುಹಿಸಿದ. ಅಷ್ಟರಲ್ಲಿ ತಾಯಿ ನೋಡಿ ಅವಳನ್ನು ಕೂದಲಿಡಿದು ಬಡಿದ. ಮಲ್ಲಯ್ಯನನ್ನು ಬಯ್ಯುವಳು. ಮಲ್ಲಯ್ಯ ನಾನಾ ದಿನ ಬಳೆಮಾರಿ ಗಂಗಿ ಮಾಳಮ್ಮನ

ಮನೆ ಮುಂದೆ ಬಂದನು. ಗಂಗಿಮಾಳಮ್ಮ ಸ್ನಾನಮಾಡಿ ಉಡಿಯಲ್ಲಿ ಭಂಡಾರ ಕಟ್ಟಿಕೊಂಡು ಮೈಲಾಪುರದ ಗುಡ್ಡಕ್ಕೆ ಹೋದರು. ಮಾಳಮ್ಮನ ಅಣ್ಣಂದಿರು ವಿಷಯ ತಿಳಿದು ಬಡಿಗೆಗಳನ್ನು ಹಿಡಿದು ಬಂದರು. ಆದರೆ ಅಷ್ಟರಲ್ಲೆ ಮದುವೆ ಮುಗಿದಿತ್ತು. ಮುಂದಿಟ್ಟ ಹೆಜ್ಜೆ ಹಿಂದಕ್ಕೆ ಹಿಡಿಯುವುದಿಲ್ಲವೆಂದಳು. ಮದುವೆ ಪೂರ್ಣಗೊಳ್ಳಲಿಲ್ಲ. ಅದಕ್ಕಾಗಿ ಅಣ್ಣಂದಿರಿಗೆ ಶಾಪಕೊಟ್ಟಳು. ಅವರು ಮಗ್ಗಯ್ಯಗಳಾಗಿ ಹೋದರು.

**ಸಿದ್ದರಾಮನ ವೃತ್ತಾಂತ**

**ಮೂಕ ಮಗನ ಕೊಟ್ಟನ ಸಿದ್ದರಾಮನಂದಾರ**

ರೇವಣಸಿದ್ದರು ಒಂದು ದಿನ ಮುದ್ದುಗೌಡ-ಸುಗಲವ್ವರ ಮನೆಗೆ ಬಂದನು. ಮಕ್ಕಳಿಲ್ಲದ ಮನೆಯಲ್ಲಿ ಊಟ ಮಾಡುವುದಿಲ್ಲವೆಂದು ಹಠಮಾಡಿದ. ನೀನೆ ಮಕ್ಕಳನ್ನು ಕರುಣಿಸಿಲ್ಲ ಇನ್ನೆಲ್ಲಿ ಮಕ್ಕಳು ಎಂದರು. ಆಗ ರೇವಣಸಿದ್ದರು ಮಕ್ಕಳ ವರವನ್ನು ದಯಪಾಲಿಸಿ ತಿರುಗಿ ಹೋದನು. ಸುಗಲವ್ವನ ಗರ್ಭ ನಿಂತು ಒಂಬತ್ತು ತಿಂಗಳಾದ ಮೇಲೆ ಗಂಡು ಮಗು ಹುಟ್ಟಿತು. ಅವನೆ 'ಸಿದ್ದರಾಮ'.

**ಮೂಕ ಮಗನಿಗೆ ಮಾತು ಬರತಾವ**

ಸಿದ್ದರಾಮ ಶಾಲೆಗೆ ಹೋಗುವ ಸಮಯದಲ್ಲಿ ತಂದೆ ತಾಯಿಗಳು ದನಕಾಯಲು ಹಚ್ಚಿದರು. ಹೊಲದಲ್ಲಿ ದನಕಾಯುವ ಹುಡುಗರೆಲ್ಲ ತಮಗೆ ಎಳ್ಳುತಿನ್ನುವ ಆಸೆಯಾಗಿದೆ ಎಂದರು. ಸಿದ್ದರಾಮ ಎಲ್ಲಾ ಹಸುಗಳನ್ನು ಕರೆದುಕೊಂಡು ಬಂದು ಮನೆಯ ನೆಲುವಿನಲ್ಲಿ ಎಳ್ಳು ತಂಬಿದ ಗಡಿಗಿ ಇತ್ತು. ಕೋಲಿನಿಂದ ಅದನ್ನು ತೂತುಗೊಳಿಸಿ ಎಲ್ಲರೂ ಎಳ್ಳನ್ನು ತುಂಬಿಕೊಂಡು ಹೋದರು. ಸಿದ್ದರಾಮ ಕೂಡ ತೆಗೆದುಕೊಂಡು ತೂತು ಬಿದ್ದ ಗಡಿಗೆಗೆ ಕೋಲು ಮುಟ್ಟಿಸಿದಾಗ ಅದು ಬರಿದಾಯಿತು. ಮೂರು ದಿನಗಳ ನಂತರ ದನಕಾಯವ ಹುಡುಗರು ಹೇಳಿದರು. ತಾಯಿ ಮನೆಗೆ ಬಂದು ನೋಡಿದಳು. ಗಡಿಗಿ ತುಂಬಾ ಎಳ್ಳು ಇದ್ದವು. ಅಲ್ಲದೆ ಬುತ್ತಿಕಟ್ಟಿಕೊಟ್ಟಳು. ಎಲ್ಲರೂ ಆ ಬುತ್ತಿಯನ್ನು ಉಂಡರು. ಮಲ್ಲಯ್ಯನು ಬಂದು ನನಗೆ ಹಸಿವಾಗಿದೆ ಮೊಸರನ್ನ ಬೇಕೆಂದು ಕೇಳಿದನು. ದನಕಾಯಲು ಮಲ್ಲಯ್ಯನಿಗೆ ಬಿಟ್ಟು ಸಿದ್ದರಾಮ ಮನೆಗೆ ಓಡಿದನು. ಅಲ್ಲಿ ಅವರಮ್ಮನನ್ನು ಅವ್ವಾ... ಅವ್ವಾ... ಎಂದಾಗ ಮಗನಿಗೆ ಮಾತು ಬಂದಿದ್ದು ನೋಡಿ ತಾಯಿ ಸಂತಸ ಪಟ್ಟಳು. ಮೊಸರನ್ನ ಕೇಳಿ ಬುತ್ತಿಕಟ್ಟಿಸಿಕೊಂಡು ಬಂದ. ಅಲ್ಲಿ ಮಲ್ಲಯ್ಯ ಇಲ್ಲದುದ ಕಂಡು ಮಲ್ಲಯ್ಯ... ಮಲ್ಲಯ್ಯ... ಎಂದು ಕಿರುಚುತ್ತಾ ಶ್ರೀಶೈಲಕ್ಕೆ ಹೋಗುವವರ ಜೊತೆ ನಡೆದ. ಅಲ್ಲೂ ಮಲ್ಲಯ್ಯ ಕಾಣದೆ ಬೆಟ್ಟದಿಂದ ಹಾರಿದ. ಆಗ ಮಲ್ಲಯ್ಯ ಬಂದು ಅವನನ್ನು ಹಿಡಿದನು. ಇಬ್ಬರೂ ಕೂಡಿ ಮೊಸರನ್ನ ಉಂಡರು.

**ದೇವಿ ಧರ್ಮರ ಹಾಡೇನ ಇಲ್ಲಿಗ ಮುಗದಾವೇನಯ್ಯಾ**

ಇದು ಹಾಲುಮತ ಕಾವ್ಯದ ಕಥನವಾಗಿದೆ. ಹಲವು ವೃತ್ತಾಂತಗಳ ಮೂಲಕ ಇಡೀ ಕಾವ್ಯವು ಹಾಲುಮತದ ಬಗ್ಗೆ, ಲೀಲೆಗಳ ಬಗ್ಗೆ, ನಂಬಿಕೆಗಳ ಬಗ್ಗೆ, ದೇವರುಗಳ ಬಗ್ಗೆ, ಶಿಷ್ಯರ ಭಕ್ತರ ಬಗ್ಗೆ, ಪವಾಡಗಳ ಬಗ್ಗೆ, ನಂಬಿಕೆಗಳ ಬಗ್ಗೆ, ಶರಣರ ಸಾಧನೆಗಳ ಬಗ್ಗೆ ಹೀಗೆ ಹತ್ತು-ಹಲವು ಮುಖಗಳಲ್ಲಿ ಕಥೆ ಸಾಗುತ್ತದೆ. ಕಾವ್ಯವು ಜನರ ಮೌಢ್ಯವನ್ನು ತೊಳೆದು, ಸ್ವಾರ್ಥ, ಹಿಂಸೆ, ತಾರತಮ್ಯ, ಗರ್ವ, ಅನೇಕ ಹಿತಾಂಶಗಳನ್ನು ನೀಡುವಲ್ಲಿ ಯಶಸ್ವಿಯಾಗಿದೆ. ಹಾಲುಮತ ಕಾವ್ಯ ಸೃಷ್ಠಿ ಪ್ರಕ್ರಿಯೆ ಬಗ್ಗೆ ಮುಂದೆ ನೋಡಬಹುದಾಗಿದೆ.

ಹಾಲುಮತ ಕಾವ್ಯದಲ್ಲಿ ಕಥೆಯು ಮೂಲದಿಂದ ಪ್ರಾರಂಭವಾಗುತ್ತಾ, ಪವಾಡಗಳ ಶರಣರ ಭಕ್ತಿ ಸಾಧನೆಯ, ಲೋಕಕಲ್ಯಾಣಕ್ಕಾಗಿ ಮಾಡಿದ ಸುಧಾರಣೆಯ ಪರಿವರ್ತನೆಯ ಅಂಶಗಳವರೆಗೆ ಕಾವ್ಯ ಕಥೆ ಸಾಗುತ್ತದೆ. ಭೂಮಂಡಲ ಸೃಷ್ಟಿಯಾಗಿ, ಅದರಲ್ಲಿ ಮಾನವ ಕುಲಸೃಷ್ಮಿಸಿ ಅವರಿಂದ ಕುರಿಸಾಕಾಣಿಕೆ ಮಾಡುವುದು, ಹೀಗೆ ಕಾವ್ಯದ ಕಥೆ ಪ್ರಾರಂಭವಾಗುತ್ತ ಹೋಗುತ್ತದೆ. ಕೈಲಾಸದ ಹಾಡಿಕೆಯಲ್ಲಿ ದೈವ ಸೃಷ್ಟಿ, ಪವಾಡಗಳು, ಭೂಮಂಡಲಸೃಷ್ಟಿ, ಮಾನವಕುಲ ಸೃಷ್ಮಿ, ಅವರ ಜೀವನ ಸುಧಾರಣೆಯ ದೃಷ್ಟಿ, ಜೀವನ ವಿಧಾನ ಮುಂತಾದವು ಅದರಲ್ಲಿ ಕಾಣಬಹುದು.

ಬೀರಪ್ಪನ ಪೂರ್ವಜರ ವೃತ್ತಾಂತದಲ್ಲಿ ಬೀರಪ್ಪ ಜನನವಾಗವುದುಕ್ಕೆ ಮುಂಚೆ ನಡೆಯುವ ಘಟನೆಗಳು ಅಲ್ಲಿ ಪ್ರಾರಂಭವಾಗುತ್ತವೆ. ನಂತರ ಬೀರಪ್ಪ ಅವನ ಜೀವನ ವೃತ್ತಾಂತ, ದೈವಾಂಶದ ಭಕ್ತಿ, ಪವಾಡಗಳು, ಸಾಮಾಜಿಕ ಪರಿವರ್ತನೆ, ಸಂಸ್ಕೃತಿಯ ಗುಣ ಮುಂತಾದವು ಕಾವ್ಯದಲ್ಲಿ ಬರುವವು. ನಂತರ ಮಾಳಿಂಗರಾಯ ಇವನ ಭಕ್ತಿ, ನಿಷ್ಠೆ, ಕಾಯಕ ಎದುರಿಸುವ ಸಂಕಷ್ಟಗಳು ಮುಂತಾಗಿ ಕಾವ್ಯದ ನೆಲೆಗಟ್ಟಿನಲ್ಲಿ ವಿವರಿಸಲಾಗಿದೆ. ಅಲ್ಲದೆ ಬೀರಣ್ಣನ ಲೀಲೆ, ಬಾಲ್ಯಪವಾಡಗಳು, ಮದುವೆ ಸಂದರ್ಭ, ಅಕ್ಕಮಾಯವ್ವರ ಕಾಯಕನಿಷ್ಠೆ ಹೀಗೆ ಕಾವ್ಯ ವಿಸ್ತಾರವಾಗಿ ಸಾಗುತ್ತ ನಡೆಯುತ್ತದೆ. ಮುಂದೆ ಹಲವಾರು ಶರಣರ ವೃತ್ತಾಂತಗಳು ಬಂದರೂ ಅವರಲ್ಲಿ ಭಕ್ತಿಯ ಪರಿವರ್ತನೆಯಲ್ಲಿ ಸಾಮಾಜಿಕ ಸಾಂಸ್ಕೃತಿಕ ಔನ್ನತ್ಯದಲ್ಲಿ ಭಾಗಿಯಾಗುವರು. ಹೀಗೆ ಕಾವ್ಯ ಒಂದು ಲೋಕಕಲ್ಯಾಣದ ಪರಿವರ್ತನೆಯ ಹಾದಿಯಲ್ಲಿ ಸಾಗುತ್ತದೆ.

**ಅಡಿ ಟಿಪ್ಪಣಿ**

೧. ಡಾ. ವೀರಣ್ಣ ದಂಡೆ, (ಸಂ.), **ಜನಪದ ಹಾಲುಮತ ಮಹಾಕಾವ್ಯ**

ಮೌಖಿಕ ಮಹಾಕಾವ್ಯವಾದ 'ಹಾಲುಮತ ಮಹಾಕಾವ್ಯ'ವು ಮೌಖಿಕ ಪರಂಪರೆಯ, ಸೃಜನಶೀಲನೆಲೆಗಳನ್ನು ಪ್ರತಿಬಿಂಬಿಸಿದೆ. ಹಳೆಯ ಸಾಂಸ್ಕೃತಿಕ ಲೋಕದ ಭಾವನೆಗಳನ್ನು ಮೌಖಿಕ ಪರಂಪರೆಯು ವರ್ತಮಾನದ ಜೊತೆಗೆ ಬೆಸುಗೆ ಮಾಡುತ್ತಿರುತ್ತದೆ. ಮಹಾಕಾವ್ಯದಲ್ಲಿ ಪುರುಷ ಗಾಯಕರು ಕೂಡ ಮೌಖಿಕ ಪರಂಪರೆಯಲ್ಲಿ ಬರುವ ಸಾಂಸ್ಕೃತಿಕ ವೀರರಿಗೆ ಸಂಬಂಧಿಸಿದಂತೆ ಅನೇಕ ಕಾವ್ಯಗಳನ್ನು ಕಟ್ಟಿ, ಹಾಡಿ, ಜನಪದ ಸಮೂಹದ ಆಧ್ಯಾತ್ಮವನ್ನು ಬೇರೊಂದು ಆಯಾಮದಲ್ಲಿ ತೋರಿದ್ದಾರೆ. ಆಧ್ಯಾತ್ಮದ ಹಂಬಲಿಸುತ್ತ ಮೌಖಿಕ ಪರಂಪರೆಯಲ್ಲಿ ಉತ್ಕಟವಾದ ಲೀನಭಾವದಲ್ಲಿ ಧೀನನಾದದಲ್ಲಿ ಹರಿದು ಬರುತ್ತದೆ. ಮಹಾಕಾವ್ಯಗಳಲ್ಲಿ ಮೈಮರೆಯುವ ಆಯಾ ಸಮುದಾಯಗಳು ರಮ್ಯ ಮಾಂತ್ರಿಕ ವಿಶ್ವಾಸದಲ್ಲಿ ಲೌಖಿಕದ ತಾರತಮ್ಯಗಳನ್ನು ಮೆರೆಯುತ್ತ ಸ್ಥಳೀಯತೆಯನ್ನು ಮೀರಿ ವಿಶ್ವಾತ್ಮಕ ಜಗಿತಕ್ಕೆ ಪಯಣಿಸಿ ವಿರಮಿಸುತ್ತವೆ. ಇದು ಅಖಂಡವಾದುದು, ಎಲ್ಲರ ಹಿಂಸೆಯನ್ನು ಸಹಿಸಿ ಬಿಡುವಂತದ್ದು. ಕಾವ್ಯದ ನಾದದಲ್ಲಿ ತನ್ನ ದಣಿವನ್ನು ನಿವಾರಿಸಿಕೊಳ್ಳುತ್ತಾ ಎಂದೆಂದೂ ಮುಗಿಯದ ವಿಶ್ವಾಸದಲ್ಲಿ ಜೀವಿಸುವುದು ಕಾವ್ಯ ಸಮುದಾಯಗಳ ಬಹುದೊಡ್ಡ ಶಕ್ತಿ.

ಮಹಾಕಾವ್ಯದಲ್ಲಿ ಸಮುದಾಯದ ಅಖಂಡ ಪ್ರಜ್ಞೆ ಜೀವನಮೌಲ್ಯ, ಸಂಯುಕ್ತಭಾವ ಮುಂತಾದವು ಮಹಾಕಾವ್ಯದ ಜೀವಾಳವಾಗಿರುತ್ತವೆ. ಸಮಷ್ಟಿಯ ಪ್ರತಿರೂಪವಾಗಿದೆ. ಮೌಖಿಕ ಪರಂಪರೆಯು ನಾದಲೀಲೆಯಲ್ಲಿ ದಿವ್ಯಾನುಭಾವವನ್ನು ಮೈದುಂಬಿಕೊಳ್ಳುತ್ತದೆ. ನಾದವಿಲ್ಲದೆ ಮೌಖಿಕ ಪರಂಪರೆಗೆ ಮುಕ್ತಿಯೆ ಇಲ್ಲ. ತನ್ನ ಆಚರಣೆಯಿಂದ ಹಿಡಿದು ಅಭಿವ್ಯಕ್ತಿಯ ಎಲ್ಲ ಪ್ರಕಾರಗಳಲ್ಲೂ ನಾದಲೀಲೆಯು ಗಾಢವಾಗಿ ಅನಾವರಣಗೊಳ್ಳುವಂತೆ ಮಾಡುವುದು ಆದಿಮ ಸ್ಥಿತಿಯ ಭೌತಿಕ ಗುಣ. ನಾದದ ವಿಧಾನದಲ್ಲಿ ಕಾವ್ಯವನ್ನು ನಿರೂಪಿಸುವುದರಿಂದ ಕೇಳುಗರನ್ನು ಸಮೀಪಿಸುವುದು ಸಾಧ್ಯ ಎಂತಲೂ ಜನಪದರು ಭಾವಿಸುವುದು.

ಜನಪದರಿಗೆ ಇಂಪಾದ ಭೌತಿಕ ರಚನೆಯು ನಿಸರ್ಗದ ರಾಗಗಳಿಂದಲೆ ಬಂದುದಾಗಿದೆ. ಯಾವುದೆ ಒಂದು ಕೆಲಸವನ್ನು ನಾದದಿಂದ ನಿರ್ವಹಿಸುವುದು ಅವರು ರೂಪಿಸಿಕೊಂಡ ಸಂಸ್ಕೃತಿಯಿಂದಲೆ ಆಗಿದೆ. ಸಂಸ್ಕೃತಿಯ ಪ್ರತಿಯೊಂದು ಅಭಿವ್ಯಕ್ತಿಯು ಅದರ ಕಲಾರಾಧನೆಯೂ ನಾದದಿಂದ ಸೌಂದರ್ಯವನ್ನು ಪಡೆದುಕೊಳ್ಳುತ್ತದೆ. ಅರ್ಥ ಮತ್ತು ನಾದ ಎರಡೂ ಬೆರೆತು ಅದರ ಜೊತೆಗೆ ರಾಗಮೇಳವೇ ಬೆಸೆದು ಬಂದಿದೆ. ಜನಪದ ಸಮಾಜದ ಆತ್ಮಕಥನಗಳು ಏಕಕಾಲಕ್ಕೆ ಸಂಗೀತ, ಪ್ರದರ್ಶನ, ಆರಾಧನೆ, ಸಾಹಿತ್ಯ, ಸಂಸ್ಕೃತಿ ಮತ್ತು ಸಾಮಾಜಿಕ ಲೋಕದ ಸುಪ್ತಮನಸ್ಸಿನ ಹಲವು ರೂಪಗಳನ್ನು ನಿರೂಪಿಸುತ್ತದೆ.

ಜನಪದ ಕಾವ್ಯಗಳ ನಾದವು ಆದಿಮವಾದದ್ದು, ದಣಿದ ನಾದವು ಜನಪದ ಪರಂಪರೆಯ ವಿಶೇಷ. ಆದಿ ನಾದವು ಗಾಢವಾದ ಮಾಂತ್ರಿಕ ಧ್ವನಿರಮ್ಯತೆಯನ್ನು ಬಿಂಬಿಸಿದೆ. ಹಾಡುಗಾರಿಕೆಯಿಂದ ಸಾಂಸ್ಕೃತಿಕ ನಾಯಕರನ್ನು ಆಚರಿಸಲು ಸುಲಭವಾಗುತ್ತದೆ. ಆರಾಧನೆ ಇದ್ದಲ್ಲೆಲ್ಲ ಹಾಡುಗಾರಿಕೆ ಇರುತ್ತದೆ.ಜನಪದ ಕಾವ್ಯಗಳು ಸಂಸ್ಕೃತಿಯ ನಾದರೂಪಗಳು ಹೇಗೊ ಹಾಗೆಯೆ ಅವು ನಿಸರ್ಗನಿಷ್ಟ ಸೃಜನಶೀಲತೆಯ ಪ್ರತಿರೂಪ. ನಿಸರ್ಗ ಜನಪದ ಪರಂಪರೆಯ ದೊಡ್ಡ ಚೈತನ್ಯ. ಜನಪದರ ಭಾಷೆಯ ಒಟ್ಟು ಸ್ವರೂಪವೇ ನಿಸರ್ಗವನ್ನು ಪ್ರತಿಬಿಂಬಿಸುತ್ತದೆ.

ಸೃಜನಶೀಲತೆಯು ಸಂಸ್ಕೃತಿಗೆ ನಿಸರ್ಗವನ್ನು ಅನ್ವಯಿಸಿ ಅನುಸಂಧಾನದ ಧ್ಯಾನಕ್ರಮವಾಗಿರುತ್ತದೆ. ಮೌಖಿಕ ಕಾವ್ಯಗಳು ತನ್ನ ಸಾಂಸ್ಕೃತಿಕ ಪರಿಸರವನ್ನು ನಿಸರ್ಗದ ಪರಿಸರದ ಮೂಲಕ ಒಂದನ್ನೊಂದು ಬೆಸೆಯುತ್ತದೆ.

ಜನಪದ ಕಾವ್ಯಗಳ ದಿವ್ಯರಮ್ಯತೆಯ ಆಧ್ಯಾತ್ಮ ಸಾಧನೆಯ ಮತ್ತೊಂದು ವಿಧಾನ. ಇಂತಹ ಗುಣವು ನಿಸರ್ಗನಿಷ್ಠ ಸೃಜನಶೀಲತೆಯಿಂದ, ನಿಸರ್ಗದ ನಿಗೂಢ ಗಾಂಭೀರ್ಯವು ಸಹ ಇದರಿಂದಲೆ ಜನಪದ ಕಾವ್ಯಗಳಿಗೆ ಉಂಟಾಗಿರುವುದು. ಪುರಾಣ ಗುಣವೂ ಜೊತೆಗೂಡಿದೆ. ಜನಪದ ಮಹಾಕಾವ್ಯಗಳಲ್ಲಿ ಕಾಯಕ ನಿಷ್ಠ ಮತ್ತು ಮಾತೃನಿಷ್ಠ ಸೃಜನಶೀಲತೆಯ ಗುಣಗಳನ್ನು ಸಮುದಾಯದ ಸಂಸ್ಕೃತಿಯ ಅಂಶಗಳನ್ನು ಕಾಣಬಹುದಾಗಿದೆ. ಕಾವ್ಯಗಳಲ್ಲಿ ಪುರ್ನಸೃಷ್ಠಿ ಅಂಶಗಳನ್ನು ಹೇರಳವಾಗಿ ಗಮನಿಸಬಹುದಾಗಿದೆ. ಸೃಜನಶೀಲ ನೆಲೆಯಲ್ಲಿ ಮಹಾಕಾವ್ಯಗಳು ನವ್ಯಚೇತನವನ್ನು, ಗಾಂಭೀರ್ಯವನ್ನು, ಸಾಂಸ್ಕೃತಿಕ ಬಲವನ್ನು, ಸಮುದಾಯದ ಪರಂಪರೆಯನ್ನು, ನಾಯಕರ ಸಾಧನೆಯನ್ನು ಅವರ ಜೀವನ ವೃತ್ತಾಂತವನ್ನು, ಮಹಾಕಾವ್ಯದಲ್ಲಿ ಮೂಡಿಬರುವ ಸೃಷ್ಠಿ, ಸಂಸ್ಕೃತಿ, ಪರಂಪರೆ, ಸಾಮಾಜಿಕ ನೆಲೆ, ಸಂಕೇತಗಳು ಮುಂತಾದವು ಸೃಜನಶೀಲ ನೆಲೆಗಳಿಂದ ಬರುವವು ಕಾವ್ಯದಲ್ಲಿ.

ಮೌಖಿಕ ಕಾವ್ಯಲೋಕದ ಬಗ್ಗೆ ಸಾಂಸ್ಕೃತಿಕ ವೀರರ ಬಗ್ಗೆ ಪ್ರವಚನ ಮಾಡುವಾಗ ಅಲ್ಲದೆ ಅವರ ಮೌಖಿಕ ಕಥನ ಕೃತಿಯ ಉದ್ದಕ್ಕೂ ಜನಪದ ಮಹಾಕಾವ್ಯಗಳ ಬಗ್ಗೆ ಅತ್ಯಂತ ಸೃಜನಶೀಲ ಒಳನೋಟಗಳ ವಿಶ್ಲೇಷಣೆಗಳು ತುಂಬಿದ್ದು ಮೌಖಿಕ ಕಾವ್ಯಗಳ ಅಧ್ಯಯನದ ಸಂದರ್ಭದಲ್ಲಿ ಇದೊಂದು ಅಪರೂಪದ ಕೃತಿಯಾಗಿದೆ. ಈ ಕೃತಿಯ ಆಧಾರದ ಮೇಲೆಯೇ ಇಲ್ಲಿನ ಹಲವು ವಿಷಯಗಳನ್ನು ಚರ್ಚಿಸಿ ಅಳವಡಿಸಿಕೊಳ್ಳಲಾಗಿದೆ.[7]

ಮೌಖಿಕ ಪರಂಪರೆಯಲ್ಲಿ ಒಂದು ಮಹಾಕಾವ್ಯ ಒಬ್ಬನಿಂದಲೇ ರಚಿತವಾಗಿರಲು ಸಾಧ್ಯವಿಲ್ಲ. ಒಂದು ಕಾವ್ಯದ ಒಂದೊಂದೇ ಭಾಗಗಳು ಸುದೀರ್ಘವೆನ್ನಬಹುದಾದ ಅವಧಿಯಲ್ಲಿ ಸೃಷ್ಟಿಗೊಂಡು ಮತ್ತೆ ನಿರಂತರವಾಗಿ ಪುನರ್‌ಸೃಷ್ಟಿಗೊಳ್ಳುತ್ತಾ ಜೀವಂತವಾಗಿರುವ ಕಾವ್ಯಗಳು. ಹೀಗಾಗಿ ಅವುಗಳ ಸೃಷ್ಟಿಯ ಆಂತರ್ಯದಲ್ಲಿ ಒಂದು ಸುಸಂಗತತೆಯು ಕೊರತೆ ಎದ್ದು ಕಾಣುತ್ತದೆ. ಇದು ಒಟ್ಟಾರೆಯಾಗಿ ಹಾಲುಮತ ಕಾವ್ಯ ಸೃಷ್ಟಿ ಪ್ರಕ್ರಿಯೆಯಲ್ಲದೆ ಜನಪದ ಎಲ್ಲಾ ಮಹಾಕಾವ್ಯಗಳಲ್ಲೂ ಕಂಡುಬರುವ ಅಂಶ. ಹಾಲುಮತ ಕಾವ್ಯ ಹಾಡುವ ಕಾವ್ಯ. ಹೀಗಾಗಿ ಶ್ರೋತೃಗಳು ಎದುರಿಗೆ ಇರಲೇಬೇಕು. ಹಗಲು ತಮ್ಮ ಕಾಯಕ, ರಾತ್ರಿ ಮಾತ್ರ ಹಾಡು ಹೇಳಲು, ಕೇಳಲು ಜನಪದರಿಗೆ ಸಾಧ್ಯವಾಗಿದೆ.

ಹಾಲುಮತ ಕಾವ್ಯ ಆಚರಣಾತ್ಮಕ ಕಾವ್ಯಗಳಲ್ಲಿ ಈ ಕಾವ್ಯದ ಸಮಷ್ಠಿ ಆಚರಣೆಯನ್ನು ಕಾಣಬಹುದು. ವಿಶೇಷವಾಗಿ ಜಾತ್ರೆ, ಉತ್ಸವಗಳಂತಹ ಸಂದರ್ಭಗಳಲ್ಲಿ ಕಾವ್ಯದ ಸಮಗ್ರ ಸಾಮಾಜಿಕ ಸಾಮ್ಯತೆಯನ್ನು ಕಾಣಬಹುದಾಗಿದೆ.

ಮಹಾಕಾವ್ಯದ ನಾಯಕರು ಒಂದೊಂದು ಧರ್ಮ, ಒಂದೊಂದು ಪ್ರದೇಶಕ್ಕೆ ಸಂಬಂಧಹೊಂದಿದವರಾಗಿದ್ದಾರೆ. ಆ ಪ್ರದೇಶದಲ್ಲಿ ಅವರ ವಾಸಸ್ಥಳದ ಗುರುತು, ಗುಡ್ಡಗವಿ, ಗುಡಿ-ಗುಂಡಾರಗಳಿದ್ದು, ಅಲ್ಲಿ ಜಾತ್ರೆ-ಉತ್ಸವಗಳು ನಡೆಯುತ್ತವೆ. ಕಲಬುರ್ಗಿ ಜಿಲ್ಲೆಯಲ್ಲಿ ಹಾಲುಮತ ಪುರಾಣ. ಹೀಗಾಗಿ ಆಯಾ ನಾಯಕರ ಕಥೆ ಅಷ್ಟೇ ಪ್ರದೇಶಕ್ಕೆ ಸೀಮಿತಗೊಂಡು ಪ್ರಸಾರವಾಗಿರುತ್ತದೆ. ಜೊತೆಗೆ ಕಾವ್ಯಕ್ಕೆ ಪ್ರಾದೇಶಿಕ ಭಾಷೆಯ ಹೊದಿಕೆಯೊಂದು ಇದ್ದೆ ಇರುತ್ತದೆ. ಆ ಭಾಗದಲ್ಲಿ ಆ ದೇವರ ಭಕ್ತಿಗಣವಿದ್ದು ಕಾವ್ಯದ ಹಾಡುಗಾರರು, ಕೇಳುಗರು ಆ ಕಥಾ ನಾಯಕನಲ್ಲಿ ಶ್ರದ್ಧೆ ಉಳ್ಳವರಾಗಿರುತ್ತಾರೆ. ಕಾವ್ಯದ ಸೃಷ್ಠಿಯಲ್ಲಿ ಇವು ಗಮನಾರ್ಹ ಅಂಶ.

ಕಾವ್ಯಸೃಷ್ಠಿಯಲ್ಲಿ ಹಾಡುಗಾರರು ಪ್ರಮುಖವಾದ ವ್ಯಕ್ತಿ, ವಂಶಪಾರಂಪರಗತವಾಗಿ ಹರಿದು ಕೊಂಡುಬಂದಂತಹ ಕಾವ್ಯವನ್ನು ಅವನು ಸದಾ ಜೀವಂತವಾಗಿಡುತ್ತಾನೆ. ಅದನ್ನು ಅವನು ಒಂದು ನಿರ್ದಿಷ್ಟ

ಸಮಯದಲ್ಲಿ, ಭಕ್ತಿಯಿಂದ ಕಾವ್ಯದ ನಾಯಕನನ್ನು ಕೊಂಡಾಡುತ್ತ ಅವನ ಸಾಧನೆ, ಲೋಕಕಲ್ಯಾಣ ಅಂಶಗಳನ್ನು ಕಾವ್ಯದಲ್ಲಿ ಸೃಷ್ಟಿಸುತ್ತ ಮನಸ್ಸಿನ ತುಂಬಾ ಶಾಂತಿ ನೆಲೆಯಾಗುವಂತೆ ಹಾಡುತ್ತಾನೆ. ಕೇಳುಗರು ಭಕ್ತಿಯಿಂದ ಆಲಿಸುತ್ತಾರೆ.

ಹಾಲುಮತ ಕಾವ್ಯದ ಸೃಷ್ಟಿಯಲ್ಲಿ ಪ್ರತ್ಯೇಕ ಕಥಾನಕಗಳ ಸೃಷ್ಟಿ ನೋಡಬಹುದಾಗಿದೆ. ಕಾವ್ಯದಲ್ಲಿ ದೀರ್ಘತೆಯನ್ನು, ಅನೇಕ ಭಾಗಗಳು ರಚನೆಗೊಂಡಂತೆ ಕಾಣಬಹುದಾಗಿದೆ. ಕೇಳುವವರು ವಿಶ್ರಾಂತಿಗಾಗಿ ಹೋದಾಗ, ಬರುವ ಹೊಸ ಕೇಳುಗರಿಗೆ ಕಾವ್ಯ ಸ್ಪಂದಿಸಬೇಕಾದರೆ ಕಾವ್ಯ ಹೇಳುವ ಬಗೆ ಮತ್ತು ಅದರ ರಚನೆ ಪರಿಪೂರ್ಣವಾಗಿರಬೇಕಾಗುತ್ತದೆ. ಹೀಗಾಗಿ ಮಹಾಕಾವ್ಯದ ಕಥಾನಕಗಳು ಪ್ರತ್ಯೇಕ ಅಸ್ತಿತ್ವ ಪಡೆದು ತಮ್ಮಷ್ಟಕ್ಕೆ ತಾವು ಪರಿಪೂರ್ಣವಾಗಿರುತ್ತವೆ. ಕಾವ್ಯದಲ್ಲಿ ಬರುವ ಆದಿಗೊಂಡನ ಚರಿತ್ರೆ, ಮಾಳಿಂಗರಾಯ ಚರಿತ್ರೆ, ಬೀರೇಶ್ವರ ಚರಿತ್ರೆ ಮುಂತಾದವನ್ನು ಇಲ್ಲಿ ಗಮನಿಸಬಹುದಾಗಿದೆ.

ಕಾವ್ಯದ ಸೃಷ್ಟಿಯಲ್ಲಿ ಪ್ರಾರಂಭದ ಸ್ತುತಿ, ಕಾವ್ಯವಸ್ತುವಿನ ಬೆಳವಣಿಗೆ, ಕೊನೆಗೆ ಮುಕ್ತಾಯದ ಗುರುತುಗಳನ್ನು ಕಾಣಬಹುದಾಗಿದೆ. ಪ್ರತ್ಯೇಕ ಅಸ್ತಿತ್ವ ಹೊಂದಿದ ಆ ಕಾವ್ಯಗಳು ಒಳಗಡೆ ಮತ್ತೆ ಅಲಲ್ಲಿ ನಿಲುಗಡೆಗಳಿರುತ್ತವೆ. ಅಂದರೆ ಒಂದು ದಮ್ಮು ಹಾಡಿದ ನಂತರ ವಿರಾಮಕ್ಕಾಗಿ ಕಾವ್ಯವನ್ನು ಅಲ್ಲಲ್ಲಿ ನಿಲ್ಲಿಸಲಾಗುತ್ತದೆ. ಉದಾಹರಣೆಗೆ ಹಾಲುಮತ ಕಾವ್ಯದಲ್ಲಿ ಮೊದಲಿಗೆ ಸ್ವಾಮಿ ನಮ್ಮಯ್ಯ ದೇವರು ಬಂದಾವ ಬನ್ನಿರೆ ಎಂದಿದ್ದರೆ ಮಧ್ಯದ ಮತ್ತು ಕೊನೆಯ ನಿಲುಗಡೆಗಳಲ್ಲಿ ಹೀಗೆ ಬರುತ್ತದೆ.

"ಇಲ್ಲಿಗೆ ಹರಹರ ಇಲ್ಲಿಗೆ ಶಿವಶಿವ

ಇಲ್ಲಿಗೆ ಇದು ಒಂದು ಸಂದೇಲೊ

ಸಂದಿನ ಪದಗಳು ವಂದಿಸಿ ಹೇಳುವೆ

ತಂದ ಮಾಳಿಂಗ ರಾಯನೋ

ದೇವರು ಬಂದಾವ ಬನ್ನಿರೋ

ಹೀಗೆ ಕಾವ್ಯದ ವಿರಾಮಕ್ಕಾಗಿ ಹೀಗೆ ಹೇಳಲಾಗುತ್ತದೆ."

ಕಾವ್ಯದಲ್ಲಿ ಪ್ರತ್ಯೇಕ ಕಥನಾಕಗಳ ಮಾದರಿ ಪುರಾತನವಾದುದಾಗಿದೆ.

ಸೃಷ್ಟಿಯಲ್ಲಿ ಸ್ವತುತ್ರ ಅಸ್ತಿತ್ವ ಹೊಂದಿದ ಪ್ರತ್ಯೇಕ ಕಥಾನಕ ಮಾದರಿಗಳ ಕಲ್ಪನೆ ಅತ್ಯಂತ ಪುರಾತನವಾದುದು. ಇಂತಹ ಪುರಾತನ ಹಳೆಯ ಕಥಾಕಗಳೇ ಮಹಾಕಾವ್ಯದಂತ ದೀರ್ಘ ಕಾವ್ಯ ಹುಟ್ಟುವುದಕ್ಕಿಂತ ಮುಂಚೆ ಅಸ್ತಿತ್ವದಲ್ಲಿದ್ದವು. ಕಾವ್ಯದ ಮೂಲ ಲಾವಣಿಗಳಿಂದ ಎಂದು ಅನೇಕ ವಿದ್ವಾಂಸರು ಒಪ್ಪಿದ್ದಾರೆ. ಕಾವ್ಯಾಂಶ ಮಹಾ ಆಕಾರವನ್ನು ಒದಗಿಸಿಕೊಳ್ಳುವಂತಹವು. ಅನೇಕ ಕಥಾಕಗಳು ಇವುಗಳಿಗೆ ಮಹಾಕಾವ್ಯ ಹೊಂದುವ ಎಲ್ಲಾ ಆಶಯಗಳನ್ನು ಈ ಕಥಾನಕಗಳ ಶರೀರದ ಒಳಗಡೆ ಕಾಣಲು ಸಾಧ್ಯವಿದೆ.

ಕಾವ್ಯದಲ್ಲಿ ಸೃಷ್ಟಿಯಾಗುವ ಪ್ರಾರಂಭ, ಹಾಡಿದವರಿಗೆ, ಹಾಡಿಸಿದವರಿಗೆ, ದನಿಗೂಡಿಸಿದವರಿಗೆ, ಶ್ರೋತೃಗಳಿಗೆ, ಹಾಡುಕಲಿಸದವರಿಗೆ, ಹಾಡು ಕೇಳದವರಿಗೆ ಕಾವ್ಯದಲ್ಲಿ ಅಲ್ಲಲ್ಲಿ ಹೇಳಲಾಗುತ್ತದೆ, ನೆನೆಯಲಾಗುತ್ತದೆ, ಅದರ ಮಹತ್ವ ತಿಳಿಸಲಾಗುತ್ತದೆ. ಏಕೆಂದರೆ ಕಾವ್ಯದ ಒಂದು ಬಿಡಿ ಕಥಾನಕದ ರೂಪವು ಅದೇ ಆಗಿರುತ್ತದೆ.

**ಹಾಲುಮತ ಮಹಾಕಾವ್ಯವು ಕಥಾನಕಗಳ ಗುಚ್ಛವೇ ಆಗಿದೆ.**

ಬಿಡಿ-ಬಿಡಿಯಾಗಿ ನಿರ್ಮಾಣಗೊಂಡ ಮತ್ತು ಹಾಗೆಯೇ ಪ್ರಸಾರಹೊಂದಿದ ಕಥಾನಕಗಳಲ್ಲಿ, ಕಾವ್ಯದ ಭಾಗಗಳೆಂದು ಗ್ರಹಿಸಲು ಸಾಮಾನ್ಯ ಪಾತ್ರ, ಸಂಗತಿ, ಎಲ್ಲ ಕಡೆ ಕಾಣಿಸುವುದು ಕಾವ್ಯದಲ್ಲಿ ಬಿಡಿ ಬಿಡಿ ಕಥಾನಗಳನ್ನು

ಒಂದೆಡೆ ಸಂಪಾದಿಸಿ ಮುದ್ರಿಸಿದರೆ ಅದೊಂದು ಮಹಾಕಾವ್ಯವಾಗುತ್ತದೆ. ಕಥಾನಕಗಳ ಜೋಡಣೆಯಲ್ಲಿ ನಿಶ್ಚಿತತೆ ಇಲ್ಲ.

ಕಾವ್ಯದ ಸೃಷ್ಟಿಪ್ರಕ್ರಿಯೆಯಲ್ಲಿ ಇದು ಗಮನಾರ್ಹ, ಏಕೆಂದರೆ ಸ್ವತಂತ್ರ ಸ್ವತಂತ್ರ ಅಸ್ತಿತ್ವ ಹೊಂದಿದ ಭಾಗಗಳು ಪ್ರತ್ಯೇಕ ಕಥಾನಕಗಳಂತೆ ಸೃಷ್ಟಿಗೊಳ್ಳುವುದರಿಂದ, ಒಂದು ಸಮಗ್ರ ಕಥೆ ಗೊತ್ತಿರದ ಕಾವ್ಯದ ಕಥಾನಕಗಳನ್ನು ಒಂದು ಕ್ರಮದಲ್ಲಿ ಇಡುವಲ್ಲಿ ಗೊಂದಲ ಉಂಟಾಗುತ್ತದೆ. ಏಕೆಂದರೆ ಯಾವುದೇ ಕಥಾನಕದ ವಿವರವಾಗಿ ಹಿಂದೆ ಹೀಗಾಯಿತು, ಈಗ ಇಂತಹ ಘಟನೆಯಿಂದ ಈ ಭಾಗ ಮುಂದುವರೆಯುತ್ತದೆ ಎಂದಾಗಲೇ ಅಥವಾ ಇಲ್ಲಿಗೆ ಇದು ಮುಗಿದು ಇಂತಹ ಘಟನೆ ಹೇಳಲಾಗುತ್ತದೆ.

**ವೃತ್ತಿಗಾಯಕರು ಮತ್ತು ಹವ್ಯಾಸಿಗಾಯಕರು**

ಕಾವ್ಯದ ಸೃಷ್ಟಿಪ್ರಕ್ರಿಯೆಯಲ್ಲಿ ಹಾಡುವವರು ಕೆಲವು ವೃತ್ತಿಗಾಯಕರಾದರೆ, ಇನ್ನೂ ಕೆಲವರು ಹವ್ಯಾಸಿ ಗಾಯಕರು. ತಂತಿ ಮತ್ತು ಚರ್ಮವಾದ್ಯಗಳ ಬಳಕೆ ಸಾಮಾನ್ಯ. ಕೆಲವಡೆ ಕೇವಲ ಚರ್ಮವಾದ್ಯಗಳ ಬಳಕೆಯೆ ಆಗುತ್ತದೆ. ಉದಾಹರಣೆಗೆ ಹಾಲುಮತ ಪುರಾಣದಲ್ಲಿ ಡೊಳ್ಳು ಮಾತ್ರ ಬಳಕೆಯಾಗುತ್ತದೆ. ಮುಮ್ಮೇಳ, ಹಿಮ್ಮೇಳಗಳು ಎಲ್ಲಾ ಕಡೆ ಕಾಣಿಸುತ್ತವೆ. ದೀರ್ಘಕಾವ್ಯದ ಹಾಡುಗಾರಿಕೆಯಲ್ಲ ಸಹಾಯಕ ವಾದ್ಯಗಳು ಮತ್ತು ಮೇಳಗಳು ಇರಲೇಬೇಕು. ಪ್ರಭುಲಿಂಗ ಲೀಲೆ ಕಾವ್ಯದಲ್ಲಿ ಸದಾಸಂಚಾರಿ, ಬೇರೆ-ಬೇರೆ ವ್ಯಕ್ತಿಗಳ ಸಂಪರ್ಕ ಬೇರೆ-ಬೇರೆ ಘಟನೆಗಳ ನಿರ್ಮಾಣ, ಇಲ್ಲಿ ವಸ್ತು ಬೆಳವಣಿಗೆ ಕಾಣದೆ ವ್ಯಕ್ತಿಯ ಬೆಳವಣಿಗೆ ಕಾಣಲು ಸಾಧ್ಯವಾಗಿದೆ. ರಾಮಾಯಣ, ಮಹಾಭಾರತದಂತ ಕಾವ್ಯಗಳಲ್ಲ ವ್ಯಕ್ತಿಪ್ರಧಾನವಾಗದೆ, ವಸ್ತುಪ್ರಧಾನ ಬೆಳವಣಿಗೆ ಕಾಣಬಹುದು. ಹೀಗೆ ನಾಯಕ ಮತ್ತು ವಸ್ತು ಪ್ರಧಾನ ಕಾವ್ಯ ಸೃಷ್ಠಿಯಲ್ಲಿ ಭಿನ್ನತೆ ಕಾಣುತ್ತದೆ. ಹಾಲುಮತ ಕಾವ್ಯ ಹವ್ಯಾಸಿ ಹಾಡುಗಾರರಲ್ಲಿ ಸೃಷ್ಠಿಯಾಗಿದೆ.

ಕುರುಬ ಜನಾಂಗಕ್ಕೆ ಸೇರಿದ, ಒಕ್ಕಲುತನ ಮತ್ತು ಕುರಿಕಾಯುವ ಉದ್ಯೋಗ ಪ್ರಮುಖವಾಗಿ ಹೊಂದಿದ ಹವ್ಯಾಸಿ ಗಾಯಕರಿರು. ಸದರ್ಭಾನುಸಾರ ಹಾಡುವ ಹಾಡುಗಾರರು. ಈ ಗಾಯಕರು ಹವ್ಯಾಸಿ ಕಲಾವಿದರಾದುದರಿಂದ ಈ ಕಾವ್ಯದ ಸೃಷ್ಠಿ ಹೆಚ್ಚು ವಾಸ್ತವಿಕ ವಿವರಗಳಿಂದ ಕೂಡಿರುತ್ತದೆ.

ಉದಾ: ಒಬ್ಬ ಹೆಣ್ಣು ಮಗಳು ನೀರಿಗೆ ಹೊರಟ ದೃಶ್ಯ

ಕುರಿದೊಡ್ಡಿಗೆ ಬಂದು ಮರಿಗೆ ಹಾಲುಣಿಸಿ ಹಾಲುಹಿಂಡಿಕೊಳ್ಳುವ ದೃಶ್ಯ

ಬೀರಣ್ಣ ಮತ್ತು ಮಾಯವ್ವರ ಕಥೆಯಲ್ಲಿ ಅಕ್ಕತಮ್ಮರ ಸಂಬಂಧ

ಮುಂತಾದವು ತೀರ ವಾಸ್ತವ ವಿವರಣೆಗಳಿಂದ ಕೂಡಿರುತ್ತವೆ. ಇಂಥಲ್ಲಿ ಕಾವ್ಯದ ಸೃಷ್ಠಿ ತೀರ ಸಹಜ ಎನಿಸುತ್ತದೆ. ಮತ್ತು ಸರಳವಾಗಿ ಎಲ್ಲರಿಗೂ ತಿಳಿಯುವಂತಹದ್ದಾಗಿರುತ್ತದೆ.

ಹಾಲುಮತ ಕಾವ್ಯದ ಸೃಷ್ಠಿಯಲ್ಲಿ ಕಾಣುವ ಕೆಲವು ಸಾಮಾನ್ಯ ಅಂಶಗಳು

೧. ಸ್ತುತಿ ಮತ್ತು ಮಂಗಳ

೨. ಪುನರಾವರ್ತನೆ

೩. ರೂಪಾಂತರ

೪. ಹೆಣ್ಣನ್ನು ಗೆಲ್ಲುವುದು

೫. ನಾಯಕರ ಅಲೆದಾಟ

೬. ಜನಪದ ಕಥೆಗಳ ಸೇರ್ಪಡೆ

ಕಾವ್ಯದ ಹಾಡುಗಾರಿಕೆಯಲ್ಲಿ ಪ್ರಾರಂಭದಲ್ಲಿ ಸ್ತುತಿ, ಕೊನೆಯಲ್ಲಿ ಮಂಗಳ ಇರುವುದು ಸಾಮಾನ್ಯ. ಕಾವ್ಯದಲ್ಲಿ ಇವು ಕಾವ್ಯದ ಸೃಷ್ಠಿಯ ಭಾಗಗಳಾಗಿರುತ್ತವೆ. ಪ್ರತ್ಯೇಕ ಹಾಡುಗಳ ಬಳಕೆ, ಪುನರಾವರ್ತನೆಯ ಗುಣ, ಕಾವ್ಯದ ಸಾಮಾನ್ಯ ಗುಣ. ಸೊಲ್ಲುಗಳಂತು ಪ್ರತಿಸಾಲಿಗೂ ಪುನರಾವರ್ತನೆಯಾಗುತ್ತವೆ.ಹಾಲಮತ ಕಾವ್ಯದಲ್ಲಿ ಕುರಿಯ ದೊಡ್ಡಿಗೆ ಹೋಗಿ ಹಾಲು ಹಿಂಡಿಕೊಳ್ಳುವ, ಬಾವಿಯಿಂದ ನೀರು ತರುವ ವಿರಗಳು ಬಂದಾಗಲೆಲ್ಲ ಪುನಾರವರ್ತನೆ ಸಾಮಾನ್ಯ.

ಕಾವ್ಯದಲ್ಲಿ ಸ್ತ್ರೀಯನ್ನು ಅಪಹರಿಸುವುದಕ್ಕಿಂತ ಸ್ತ್ರೀಯನ್ನು ಗೆಲ್ಲುವ ಸನ್ನಿವೇಶಗಳು ಪರಿಣಾಮಕಾರಿ ಚಿತ್ರಣಗಳನ್ನು ಕಾಣುತ್ತವೆ. ನಾಯಕರು ಅಲೆದಾಡುತ್ತಲೆ ತಮ್ಮ ಲೀಲಾಸದೃಶ ಮಹಿಮೆಗಳನ್ನು ತೋರುವುದು, ಭಕ್ತರ ಬಳಗ ಹೆಚ್ಚಿಸುವುದು, ವ್ಯಕ್ತಿತ್ವ ಪ್ರಭಾವ ಬೆಳಗುವುದು. ಕಾವ್ಯ ಯಾವ ಪ್ರದೇಶಕ್ಕೆ ಬಳಕೆಯಾಗಿರುತ್ತದೆಯೋ ಆ ಪ್ರಾದೇಶಿಕ ಭಾಷೆ ಕಾವ್ಯಕ್ಕೆ ಸಹಜವಾಗಿ ಬರುತ್ತದೆ. ಹಾಡುವ ಕಾವ್ಯವಾದ ಹಾಲುಮತ ಕಾವ್ಯ ಸಂಗ್ರಹವಾಗಿ, ಪ್ರಕಟಗೊಂಡು, ಪುಸ್ತಕರೂಪದಲ್ಲಿ ಕಾಣಿಸಿಕೊಂಡಾಗ, ಸ್ಥಿರ ಪಠ್ಯ ಹೊಂದಿ ಬದಲಾದ ರಾಚನಿಕ ರೂಪವೊಂದು ಹೊರೆತು, ಸಂವಹನ ಸಾಧ್ಯತೆಗಳಲ್ಲಿ ಪ್ರಾದೇಶಿಕ ಭಾಷೆ, ಧರ್ಮ, ಸಂಸ್ಕೃತಿ, ಕಥೆಗಳ ಪದರಿನಲ್ಲಿ ಭಿನ್ನರೂಪ ತಾಳಿನಿಲ್ಲುತ್ತದೆ.

ಹಾಲುಮತ ಕಾವ್ಯದ ಸೃಷ್ಠಿಯ ವಸ್ತುಸಂಯೋಜನೆಯನ್ನು ಹೇಳುವುದಾದರೆ ಪ್ರಥಮ ಅಧ್ಯಾಯ ಕೈಲಾಸದ ಹಾಡಿಕೆ ಮತ್ತು ಕೊನೆಯ ಅಧ್ಯಾಯ ಇತರ ಶರಣರ ವೃತ್ತಾಂತಗಳು ಈ ಅಧ್ಯಾಯಗಳ ನಡುವೆ ೨ ರಿಂದ ೧೩ನೇ ಅಧ್ಯಾಯದ ತುಂಬ ವಿಸ್ತಾರವಾದ ಕಾವ್ಯದ ವಸ್ತು-ಕಥೆ ತುಂಬಿಕೊಂಡಿದೆ.

ಕಾವ್ಯದ ಮೇಲ್ಮೈರಚನೆ ಮೂರು ಭಾಗಗಳಲ್ಲಿ ಕಾಣಿಸುತ್ತದೆ.

೧. ಹಾಲುಮತ ಜನಾಂಗದಲ್ಲಿ ಪ್ರಚಲಿತದಲ್ಲಿರುವ ಸೃಷ್ಠಿಪುರಾಣಕ್ಕೆ ಸಂಬಂಧಿಸಿದ ಸಂಗತಿಗಳು

೨. ಕಾವ್ಯದ ಪೌರಾಣಿಕ ಕಲ್ಪನೆ ಹುಟ್ಟು ಹಾಕಿದ ಸಂಸ್ಕೃತಿಯ ಫಲ ಮುಂದಿನ ಕಾವ್ಯವಾಗಿದೆ.

೩. ಇತರ ಶರಣರ ಪ್ರಸಂಗಗಳನ್ನು ಹೊತ್ತ ಕೊನೆಯ ಅಧ್ಯಾಯ

ಹಾಲುಮತ ಜನಾಂಗದಲ್ಲಿ ಸೃಷ್ಠಿ ಪುರಾಣಕ್ಕೆ ಮತ್ತು ಹಾಲುಮತದವರೆಂದು ನಾಮಬರುವುದಕ್ಕೆ 'ಕೈಲಾಸದ ಹಾಡಿಕೆ'ಯಲ್ಲಿ ಗಮನಿಸುವುದಾಗಿದೆ. "ಹೊಲವನ್ನು ಅಸನುಗೊಳಿಸಿ ಗೊಬ್ಬರ ಹಾಕಿ, ಸರಿಯಾದ ವೇಳೆಗೆ ಉತ್ತುಬಿತ್ತುಗೊಳಿಸಿದ ತಯ್ಯಾರಿ ಹೊಲ" ಎನ್ನುವಂತಿದೆ ಕೈಲಾಸಾದ ಹಾಡಿಕೆ.

ಮುಂದೆ ಸುದೀರ್ಘವಾದ ಕಥೆ ಈ ಫಲವತ್ತಾದ ಹೊಲದಲ್ಲಿ ಬೆಳೆದುನಿಂತ ಫಸಲಿನಂತೆ ಭಾಸವಾಗುತ್ತದೆ. ಇಲ್ಲಿ ಕಾಣಿಸುವ ಶಿವಪಾರ್ವತಿಯರ ಲೀಲೆಯ ರೂಪವೇ ಕಾವ್ಯದ ವಸ್ತುವಾಗಿದೆ. ಕಾವ್ಯದ ಮುಖ್ಯ ವ್ಯಕ್ತಿಯಾದ ಬೀರಪ್ಪ ಮತ್ತು ತಂದೆ ಭಾಳಭರಮ ದೇವರು ಶಿವನ ಲೀಲೆಯ ಕೂಸುಗಳು. ಬೀರಪ್ಪನಂತೂ ಭೂಮಿಯ ಮೇಲಿನ ಶಿವ. ಹಾಲುಮತ ಮಹಾಕಾವ್ಯದ ಇಡೀ ಕಥೆ, ಸನ್ನಿವೇಶಗಳಲ್ಲಿ ಪೌರಾಣಿಕ ಮತ್ತು ಜಾನಪದ ಆಶಯಗಳಿಂದ ತುಂಬಿಹೋಗಿವೆ. ಒಮ್ಮೆ ಪೌರಾಣಿಕ, ಮತ್ತೊಮ್ಮೆ ಜಾನಪದ ಕ್ಷೇತ್ರ ಹೀಗೆ ಕಾವ್ಯದುದ್ದಕ್ಕೂ ಸಾಮಾನ್ಯ ಜೀವನದ ಘಟನೆಗಳನ್ನು ಬಿತ್ತರಿಸುತ್ತಲೇ ಪೌರಾಣಿಕ ಅಂಗಣಕ್ಕೆ ಏರಿ ಹೋಗಿರುತ್ತದೆ. ಕೇಳುಗನಲ್ಲಿ ಭಕ್ತಿ, ನಿಷ್ಠೆ, ತುಂಬಲು ಪೌರಾಣಿಕ ಕಾರಣವಾಗಿದೆ.

ಕಾವ್ಯವು ಸಂಪೂರ್ಣವಾಗಿ ಶಿವನಲೀಲೆ ಎಂಬಂತೆಯೇ ಇದೆ. ಕಾವ್ಯದ ಮುಖ್ಯನಾಯಕನಾದ ಬೀರಪ್ಪನು ಶಿವನ ವಂಶಜನಂತೆ ಹೇಳಲಾಗಿದೆ. ಶಿವನು ಕಥೆಗೆ ಕಾರಣನಾಗಿದ್ದಾನೆ. ಶಿವಪಾರ್ವತಿಯರ ಲೀಲಾವಿಲಾಸವೇ ಈ ಕಾವ್ಯದ ಮುಖ್ಯಚೇತನವಾಗಿದೆ.

ಕಾವ್ಯಸೃಷ್ಠಿ ಪ್ರಕ್ರಿಯೆಯಲ್ಲಿ ಹಾಡುಗಾರ ಮೇಲಿಂದ ಮೇಲೆ ಮಾನವರಲ್ಲದ, ಮನುಷ್ಯರಲ್ಲದ, ದೆವ್ವವಲ್ಲದ, ಭೂತವಲ್ಲದವರ ಚರಿತ್ರೆ ಎಂದು ಹೇಳಿದ ಹಾಗೆ, ಕಾವ್ಯ ಪ್ರಾರಂಭದಿಂದಲೂ ಪುರಾಣ ಮತ್ತು ಸಾಮಾನ್ಯ ಜನಪದ ಸಂಗತಿಗಳು ಬೆಸೆದು ಸಾಗುತ್ತವೆ. ಶಿವ ಹಾಗೂ ಕಮಲಾದೇವಿ ಸಂಬಂಧವೇ ಪ್ರಾರಂಭದ ಉದಾಹರಣೆ, ಶಿವನ ದೈಹಿಕ ಸಂಪರ್ಕವಿಲ್ಲದೆ ಕೇವಲ ಲೀಲಾಸದೃಶವಾಗಿ ಗರ್ಭಧಾರಣೆಯಾಯಿತೆಂದು ಕಾವ್ಯ ಹೇಳಿದೆ. ಕಾವ್ಯದ

ಪ್ರಮುಖ ಪಾತ್ರಗಳನ್ನು ಕೇವಲ ಮಾನವ ಸ್ವಭಾವದವರಾಗಿ ಅಲ್ಲದೆ ಅಲೌಕಿಕ ಶಕ್ತಿ ಪಡೆದವರಂತೆ ಚಿತ್ರಿಸಲು ಕಾವ್ಯ ಹೆಚ್ಚು ಆಸಕ್ತಿ ಹೊಂದಿದೆ. ಕಾವ್ಯದಲ್ಲಿ ಅನೇಕ ಪ್ರಸಂಗಗಳು ಪೌರಾಣಿಕ ಕಥೆಗಳ ಸ್ವರೂಪದಂತೆ ಕಾಣುತ್ತವೆ. ಕಾವ್ಯ ಸೃಷ್ಠಿ ಪ್ರಕ್ರಿಯೆಯಲ್ಲಿ ಕೇವಲ ಕಾವ್ಯ ಶಿವನಲೀಲೆಯಾಗಿರುವಂತೆ ಭಕ್ತಿ ಕಾವ್ಯವೂ ಆಗಿದೆ. 'ಶಿವನೇ ನಮ್ಮಯ ದೇವರು ಬಂದಾರ ಬನ್ನಿರೆ' ಎಂಬುದು ಕಾವ್ಯದ ಮೂಲ ಮಂತ್ರವಾಗಿದೆ. ಬೀರಪ್ಪನಂತ ದೇವರು, ಮಾಳಿಂಗರಾಯನಂಥ ಸ್ವಜಾತಿ, ಖೇಮಣ್ಣನಂಥ ಭಕ್ತ ಅಪರೂಪದವರೆಂದು ಕಾವ್ಯ ಸಾರುತ್ತದೆ.

ಕಾವ್ಯದ ಸೃಷ್ಠಿ ಪ್ರಕ್ರಿಯೆಯಲ್ಲಿ ದೊಡ್ಡ ಗುಣವೆಂದರೆ ಮನುಷ್ಯರನ್ನು ಮಹಾತ್ಮರನ್ನಾಗಿ ಪರಿವರ್ತಿಸಿದ್ದು, ಮಹತ್ತರವಾಗಿದೆ. ಕಮಳಾದೇವಿ ಶ್ರೇಷ್ಠ ಪತಿವ್ರತೆಯೆಂದು ಪ್ರಸಿದ್ಧಿ ಪಡೆದು ಕೈಲಾಸದ ಸ್ತ್ರೀ ದೇವತೆಗಳಿಗೆ ಮತ್ಸರ ಬಂದು ನಾನಾ ಬೆಳವಣಿಗೆಯಲ್ಲಿ ಗೆಲ್ಲುವುದು ಮನುಷ್ಯಪಾತ್ರಗಳು ತಮ್ಮ ಅವಿನಾಭಾವ ಭಕ್ತಿಯಿಂದಾಗಿದೆ.

**ಕಾವ್ಯದಲ್ಲಿ ಅನೇಕ ಸೃಷ್ಠಿ ಪುರಾಣಗಳಿವೆ**

'ಕೈಲಾಸದ ಹಾಡಿಕೆ'ಯನ್ನು ಹೊರತು ಪಡಿಸಿ ಗಮನಿಸುವುದಾದರೆ ಕಾವ್ಯದಲ್ಲಿ ಅನೇಕ ಸೃಷ್ಠಿಗಳಿವೆ. ಪ್ರಮುಖರ ಸೃಷ್ಠಿಗಳು ಕಂಟಕಗಳಿಂದ ಕೂಡಿರುವುದು, ಸಾಮಾನ್ಯ ಪುರುಷಪಾತ್ರಗಳು ಬಾಹೆಭರಮ, ಬೀರಪ್ಪ, ಮಾಳಿಂಗರಾಯ, ಜನನಗಳು ಅಸಾಮಾನ್ಯವಾಗಿವೆ. ಅಸಾಮಾನ್ಯ ಸೃಷ್ಠಿಗಳನ್ನು ಸೃಷ್ಠಿಸಿರುವುದು ಕಾವ್ಯದಲ್ಲಿ ಗಮನಾರ್ಹ. ಹಲವು ಹಬ್ಬಗಳು ರೂಪಗೊಂಡಿರುವುದು ಜನ ಚರಗ ಚೆಲ್ಲವುದು, ಕಬ್ಬು ಸುಲಗಾಯಿ ಕಿತ್ತುತರುವುದು ಮುಂತಾದ ಖುಷಿಯ ಸಂಗತಿಗಳು ಕಾವ್ಯಯದಲ್ಲಿ ಸೃಷ್ಠಿಯಾಗಿವೆ.

**ಹಾಲುಮತ ಕಾವ್ಯಸೃಷ್ಠಿ ಪ್ರಕ್ರಿಯೆಯಲ್ಲಿ ಪ್ರಮುಖವಾದ ಅಂಶ**

'ಶೃಂಗಾರ' ಭಕ್ತಿಯೊಂದಿಗೆ ಶೃಂಗಾರ ಧಾರೆಯೂ ಕಾವ್ಯದಲ್ಲಿ ಕಾಣಿಸಿಕೊಂಡಿದೆ. ಕೈಲಾಸದ ಹಾಡಿಕೆಯಿಂದಲೇ ಭಕ್ತಿ, ಶೃಂಗಾರ, ಬದುಕು, ಜನ, ಜಾನುವಾರಗಳೆಲ್ಲ ಇಳಿದು ಬರುತ್ತವೆ. ಹುತ್ತ ಮತ್ತು ನೇಗಿಲುಗಳು, ಹುತ್ತಿನ ಹೊಟ್ಟೆ ಹೀಗೆ ಎಲ್ಲಾ ಶೃಂಗಾರದಲ್ಲಿ ಪ್ರತೀಕವಾಗಿವೆ. ಕಾವ್ಯದಲ್ಲಿ ಅನೇಕ ಕಡೆಗಳಲ್ಲಿ ಲೈಂಗಿಕ ಪ್ರತಿಮೆಯಾಗಿ ಧ್ವನಿಸುತ್ತದೆ. ಕಾವ್ಯದಲ್ಲಿ ಲೈಂಗಿಕ ಪ್ರವೃತ್ತಿಯ ಪ್ರದರ್ಶನದ ಪ್ರತೀಕಗಳಾಗಿ ಬರುವಂತೆ ತೋರಿಸಿದೆ. ಶಿವನು ಕಮಳಾದೇವಿಯ ಜೊತೆಗೆ ನಡೆಸಿದ ಸರಸದಾಟ, ಲೈಂಗಿಕ ಸಂಬಂಧಗಳಲ್ಲಿ ಸ್ವಲ್ಪ ಒಗಟೊಗಟಾಗಿ ಇದ್ದರೂ ಎಲ್ಲವೂ ತೆರೆದೇ ಕಾಣುವಂತಿದೆ. ಬಹುಸರಾಗವಾಗಿ ಸಹೃದಯ ಈ ಪ್ರಸಂಗದಲ್ಲಿ ಶೃಂಗಾರದ ಎಳೆಯ ಸ್ಪರ್ಶವನ್ನು ಸ್ಪಷ್ಟವಾಗಿ ಅನುಭವಿಸುತ್ತಾನೆ.ಬೀರಪ್ಪ ಯೌವನಕ್ಕೆ ಬಂದಾಗ, ಕನ್ನಿಕಾಮ್ಮರ ದೃಶ್ಯಗಳು ಶೃಂಗಾರಮಯವಾಗಿ ಕಾವ್ಯದಲ್ಲಿ ರೂಪುಗೊಂಡಿವೆ.

ದನಗಾಹಿ ಮತ್ತು ಹೈನುಗಾರಿಕೆ, ಉದ್ಯೋಗಸ್ಥರ ವಸ್ತು ಕಾವ್ಯದ ಸೃಷ್ಠಿ ಪ್ರಕ್ರಿಯೆಯಲ್ಲಿ ಹಾಸಹೊಕ್ಕಾಗಿದೆ. ಕಾವ್ಯ ಬುಡಕಟ್ಟು ಜನರ ಬದುಕಿನ ಚರಿತ್ರೆಯಾಗಿದೆ. ಕುರಿ, ಹಸು, ಎಮ್ಮೆ ಪಳಗಿಸಿ ಸಾಕುಪ್ರಾಣಿಗಳನ್ನಾಗಿ ಮಾಡಿದ ಅವುಗಳ ಹೈನುಗಾರಿಕೆ ಉಪಯೋಗದ ಪ್ರಮುಖ ಅಂಶ. ಕುರಿಗಳ ಉತ್ಪತ್ತಿ, ಕಂಬಳಿ ತಯಾರಿಕೆ, ಮಾಳಿಂಗರಾಯನ ಪೂರ್ವಜರು ಹಸುಗಾಹಿಗಳು, ಗೌಳಿಗರು. ಬರಗಾಲದಲ್ಲಿ ದನಗಳ ಮೇವಿನ ಬಗ್ಗೆ ಕಾವ್ಯ ಬಣ್ಣಿಸುತ್ತದೆ. ಹೀಗಾಗಿ ಕಾವ್ಯದಲ್ಲಿ ಹೈನುಗಾರಿಕೆ ಶಾಂತ ಮುತ್ಯಾನೂ ಹುಟ್ಟಿ ರಾಕ್ಷಸರನ್ನು ಸಂಹಾರ ಮಾಡಿ ಕುರಿಗಳನ್ನಾಗಿಸುವುದು ಟಗರಾಗಿಸುವುದು ಕಾವ್ಯದಲ್ಲಿ ಕಾಣಬಹುದು. ಹಸುಗಳ ವೃತ್ತಾಂತ: ಕಾವ್ಯದಲ್ಲಿ ಕಾಡಾಕಳುಗಳ ಪ್ರಸಂಗ ಬರುತ್ತದೆ. ಪದ್ಮಗೊಂಡ, ಶಿವಲಿಂಗಮ್ಮನ ಮಗ ಮಡ್ಡಪ್ಪ ತಪ್ಪಿಸಿಕೊಂಡಾಗ ಅವನನ್ನು ಹಸುಗಳು ರಕ್ಷಣೆ ಮಾಡತ್ತವೆ. ಸುಖದ ಕೊಳಲು, ದುಃಖದ ಕೊಳಲು ಅವುಗಳು ಇವನ ಪ್ರೀತಿ ದುಃಖದ ಸಂಕೇತವಾಗುತ್ತವೆ. ಹಾಲುಮಾರುವುದು, ಶ್ರೀಮಂತರಾಗುವುದು ಮುಂತಾದವು ಕಾವ್ಯದಲ್ಲಿ ಹಸುಗಳ ವೃತ್ತಾಂತ ನೋಡಬಹುದಾಗಿದೆ.

ಎಮ್ಮೆಗಳ ವೃತ್ತಾಂತ: ಕಾಳಿನಾರಾಯಣ ಎಮ್ಮೆಗಳ ಸನ್ನಿವೇಶದಲ್ಲಿ ಎಮ್ಮೆಗಳ ವೃತ್ತಾಂತ ಬರುತ್ತದೆ. ಗೌಳಿಗರು, ಎಮ್ಮೆಗಳನ್ನು ಸಾಕುವ, ಹೈನುಗಾರಿಕೆ ಮಾಡುವ ಜವಾಬ್ದಾರಿಯಾಗುತ್ತದೆ. ಗೌಳಿಗರು ಎಮ್ಮೆಗಳ ರಕ್ಷಣೆಗಾಗಿ ಬಲಿಕೊಡುವುದನ್ನು ಕಾವ್ಯದಲ್ಲಿ ನೋಡಬಹುದು. ಅವುಗಳ ಸಂರಕ್ಷಣೆಯಲ್ಲಿ ಅವರ ಪಾತ್ರ ಅಪಾರ.

ಸ್ತ್ರೀಪಾತ್ರಗಳು ಕಾವ್ಯದ ಸೃಷ್ಟಿ ಪ್ರಕ್ರಿಯೆಯಲ್ಲಿ ಸ್ತ್ರೀಪಾತ್ರಗಳು ಗಂಭೀರ, ನಾಯಕತ್ವ, ಅಂಶಗಳಿಂದ ಕೂಡಿರುವಂತಹವು. ಸಾಮರ್ಥ್ಯವುಳ್ಳವರಾಗಿದ್ದಾರೆ. ಸ್ವಾತಂತ್ರ್ಯವುಳ್ಳವರು, ಹಿಂಸೆ, ಗಂಡಿನ ಕೀಟಲೆ ಮುಂತಾದ ಸಂಗತಿಗಳನ್ನು ಕಾವ್ಯದಲ್ಲಿ ಸೇರಿವೆ. ಕಾವ್ಯದಲ್ಲಿ ಹೆಣ್ಣಿನ ಸ್ವಾತಂತ್ರ್ಯದ ಕಡಿವಾಣವಿದ್ದರೆ, ಹೆಣ್ಣು ಜೀವವು ಸೃಷ್ಟಿಗಾಗಿ ಬಯಸುವ ಹಂಬಲ ಪೈಪೋಟಿಯದಾಗಿದೆ. ಬಂಜೆಯ ಸಮಸ್ಯೆ, ಕ್ರಿಯಾಶೀಲತೆ ಮುಂತಾದವು ಕಾವ್ಯದಲ್ಲಿ ಹೇರಳವಾಗಿವೆ. ಸ್ತ್ರೀಯರು ಗಂಡಸರ ನೆರಳಾಗಿ, ಸಂಬಂಧಗಳಲ್ಲಿ ಸಿಲುಕಿ ಅನೇಕ ಸಂಕಷ್ಟಗಳನ್ನು ಎದುರಿಸುವುದು ಕಾವ್ಯದಲ್ಲಿ ಕಾಣಬಹುದು. ಸ್ತ್ರೀಪಾತ್ರಗಳಲ್ಲಿ ಪ್ರಮುಖವಾದುದು ಮಾಯವ್ವ ಇವಳು ಬೀರಪ್ಪನ ಅಕ್ಕಳಾಗಿ ಕಾವ್ಯದುದ್ದಕ್ಕೂ ಸಾರಥಿಯಾಗಿ ನಿಂತಿದ್ದಾಳೆ. ಪುರುಷ ಪಾತ್ರಗಳು ಕಾವ್ಯದಲ್ಲಿ ಬೀರಪ್ಪ ಮತ್ತು ಮಾಳಿಂಗರಾಯ ಪುರುಷಪಾತ್ರಗಳಲ್ಲಿ ಪ್ರಮುಖರು. ಬೀರಪ್ಪ ಭೂಲೋಕದ ಶಿವನಾಗಿ, ದೇವರಾಗಿ, ಗುರುವಾಗಿ ಕಂಡರೆ, ಮಾಳಿಂಗರಾಯ ಶಿಷ್ಯನಾಗಿ, ಪೂಜಾರಿಯಾಗಿ ಕಾಣುತ್ತಾನೆ.

'ಹಾಲುಮತಸ್ಥರು' ಸೃಷ್ಟಿಯಾದ ಬಗ್ಗೆ ಬ. ಪ. ನಾಯಕರ ಕೃತಿಯಾದ ಹಾಲುಮತಸ್ಥರು ಇದರಲ್ಲಿ ರಸ್ತಾಪೂರ ಭೀಮಕವಿಯ 'ಹಾಲುಮತ್ತೋತ್ತೇಜಕ ಪುರಾಣ'ದಲ್ಲಿ 'ಹಾಲುಮತಸ್ಥ'ರ ಸೃಷ್ಟಿಯ ಬಗ್ಗೆ ಪುರಾವೆ ಇದೆ. ಅದು ಕೌರಭ ಋಷಿಯ ತಪಸ್ಸಿನ ಫಲವಾಗಿ ಕುರುಬ ಜನಾಂಗ ಅಂದರೆ ಹಾಲುಮತಸ್ಥರು ಸೃಷ್ಟಿಯಾದರು ಎಂದು ವಿವರಿಸಲಾಗಿದೆ. ಅದು ಇಂತಿದೆ. "ಕುರುರೇ ಮೃಗವಸ್ತ್ರಾಣಿ ಕೃತ್ವವೇ ಕೌರಭ ಋಷಿ ತನ್ ಮಹಾಸಾರ್ಥಕಂ ಚಕ್ರದೇವನಾಂ ಹಿತಕಾವ್ಯ"[೨] ಈ ಸಾಲುಗಳು ರಸ್ತಾಪೂರ ಭೀಮ ಕವಿಯು ತನ್ನ ಪುರಾಣದಲ್ಲಿ ಬರೆದ ಸಾಲುಗಳು. " ಹಾಲು ಕೆಡಬಹುದು. ಆದರೆ ಹಾಲುಮತ ಕೆಡದೆನ್ನುವುದು ಚಾರಿತ್ರ ಇತಿಹಾಸವಾಗಲಿ" ಎಂಬ ಹಾರೈಕೆ ಪುರಾಣದಲ್ಲಿದೆ. ಇದೇ ವಿಷಯವನ್ನು ಬೋ. ನಾ. ಬಸವರಾಜರವರ ಕೃತಿಯಾದ ಹಾಲುಮತದ ಹುಟ್ಟು ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ.[೩]

ಹೀಗೆ ಹಾಲುಮತ ಕಾವ್ಯದ ಸೃಷ್ಟಿ ಪ್ರಕ್ರಿಯೆಯಲ್ಲಿ ಎಲ್ಲಾ ವಸ್ತುಗಳು, ವ್ಯಕ್ತಿಗಳು, ದೇವರುಗಳು, ಪ್ರಾಣಿಗಳು, ಪವಾಡಗಳು, ಶಿಷ್ಯವೃಂದದವರು ಮುಂತಾದವು ಕಾವ್ಯದ ಸೃಷ್ಟಿಗೆ ಕಾರಣೀಭೂತವಾಗಿದೆ. ಕಾವ್ಯ ಸೃಷ್ಟಿಯಲ್ಲಿ ಕವಿಯ ಪಾತ್ರ ಮಹತ್ತರವಾದದು. ಕಥಾನಕಗಳ ಗುಚ್ಛಗಳನ್ನು ಎಲ್ಲಾ ಸೇರಿಸಿ ಮಹಾಕಾವ್ಯವಾಗಿ ಹಾಡಿ ಸಹೃದಯರ ಹೃದಯಗಳಲ್ಲಿ ಮನೆಮಾಡಿದ್ದಾರೆ. ಶಿಷ್ಟಸಾಹಿತ್ಯದಲ್ಲಿ ಕವಿಯು ನಿರ್ಧಿಷ್ಟವಾದ ಕಥನದ ಚೌಕಟ್ಟಿನಲ್ಲಿಯೇ ಪರಿಮಿತನಾಗಿರುತ್ತಾನೆ. ಒಮ್ಮೆ ಅದು ಅಕ್ಷರಲೋಕದಲ್ಲಿ ಕಾಣಿಸಿಕೊಂಡಾದ ಮೇಲೆ ಅದಕ್ಕೆ ಮಾರ್ಪಾಟುಗಳು ಇರುವುದಿಲ್ಲ. ವಸ್ತು, ತಂತ್ರ, ಕಥನದ ದೌರ್ಬಲ್ಯ, ಶಿಥಿಲತೆಗಳನ್ನು, ನಿರೂಪಣೆಯಲ್ಲಿನ ದೋಷಗಳನ್ನು ಸರಿಪಡಿಸಲು ಅಸಾಧ್ಯ. ಶಿಷ್ಟದಲ್ಲಿ ಕವಿಯು ಕಾವ್ಯ ಹುಟ್ಟುವ ಒಂದು ಸಂದರ್ಭಕ್ಕೆ ಬಂಧಿಯಾಗಿರುತ್ತಾನೆ. ಆದರೆ ಜನಪದದಲ್ಲಿ ಪರಂಪರೆಯಿಂದಲೂ ಸಾವಿರಾರು ಕವಿಗಳು ಅದೇ ಕಾವ್ಯವನ್ನು ಪುರ್ನಸೃಷ್ಟಿಸುತ್ತಲೇ ಇರುತ್ತಾರೆ. ಮೂಲತಃ ಕಥೆಯ ವಸ್ತುವನ್ನು ಮಾರ್ಪಟಿಸದಿದ್ದರೂ ಅದನ್ನು ನವೀಕರಿಸುತ್ತಲೇ ಇರುತ್ತಾರೆ. ಇಲ್ಲಿ ಜನಪದ ಕವಿಯು ಏಕಕಾಲಕ್ಕೆ ಕವಿಯೂ ಮತ್ತು ಗಾಯಕನೂ ಆಗಿರುತ್ತಾನೆ. ಕಾವ್ಯದ ಸೃಷ್ಟಿಕ್ರಿಯೆ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಕಲಬುರ್ಗಿ ಜಿಲ್ಲೆಯಲ್ಲಿ ಪ್ರಚಲಿತವಿರುವ ಈ ಕಾವ್ಯ ಮಹತ್ತರ ಭಕ್ತಿ, ಶಿವನ ಲೀಲೆಗಳನ್ನು, ಪವಾಡದೃಶ್ಯಗಳನ್ನು ಮಾನವ ದುರಾಸೆಗಳನ್ನು, ಜೀವಿಸುವ ಪರಿಯನ್ನು, ಕಾಯಕದ ಮಹತ್ವವನ್ನು ಕಾವ್ಯ ಸಾರಿ ಹೇಳಿದೆ. ಇದು ಕಾವ್ಯದ ಸೃಷ್ಟಿಗೆ ಪ್ರೇರಕವಾದ ಪ್ರಕ್ರಿಯೆಯ ಅಂಶಗಳಾಗಿವೆ.

**ಅಡಿ ಟಿಪ್ಪಣಿಗಳು**

೧. ಡಾ. ಮೊಗಳ್ಳಿ ಗಣೇಶ್, **ಮೌಖಿಕ ಕಥನ**, ಪು. ೨೬

೨. ಬ. ಪ. ನಾಯ್ಕರ, **ಹಾಲುಮತಸ್ಥರು**, ಪು. ೧೮

೩. ಬೋ. ನಾ. ಬಸವರಾಜ, **ಹಾಲುಮತದ ಹುಟ್ಟು**, ೧೫

ಹಾಲುಮತ ಕಾವ್ಯ ಕೇವಲ ಒಂದು ಕಾವ್ಯವಲ್ಲ. ಅದೊಂದು ಮಹಾಕಾವ್ಯ. ಸಂಸ್ಕೃತಿಯ ಚೇತನ. ಒಂದು ಸಂಸ್ಕೃತಿಯ ಮೂಲವನ್ನು ಭೇದಿಸಿದಂತ ಮೌಖಿಕ ಮಹಾಚೇತನ ಈ ಹಾಲುಮತ ಮಹಾಕಾವ್ಯ. ಮೌಖಿಕ ಪರಂಪರೆಯ ಅಖಂಡ ಕಾವ್ಯವಾದ ಈ ಮಹಾಕಾವ್ಯ ನಿರಂತರವಾಗಿ ಕಾಲದ ಅಗತ್ಯಕ್ಕೆ ಅನುಗುಣವಾಗಿ ನಿರೂಪಿಸುತ್ತಾ ಸಾಗುವುದು ಕಾವ್ಯದಲ್ಲಿ ಕಾಣಬಹುದು. ಮೌಖಿಕ, ನಿರೂಪಣೆಗಳೆಲ್ಲವೂ ಸೃಜನಶೀಲತೆಯ ಅತ್ಯಂತ ಸ್ವಾತಂತ್ರ್ಯದಿಂದಲೇ ಸಂವೇದನೆಯನ್ನು ಮುಕ್ತವಾಗಿ ನಿರ್ಮಿಸಿಕೊಂಡಿದೆ. ಇದು ಯಾವುದೆ ಭಾಷೆ ಮತ್ತು ಸಂಸ್ಕೃತಿ ಬೆಳೆಯುವ ಗುಣವಾಗಿದೆ.

ಕಾವ್ಯದಲ್ಲಿ ಮೌಖಿಕ ಪರಂಪರೆಯ ಎಲ್ಲಾ ನಿರೂಪಣೆಗಳು ನಿರ್ದಿಷ್ಟ ವ್ಯಕ್ತಿನಿಷ್ಠೆಗೆ ಸೀಮಿತವಾಗದೆ ವಸ್ತು ನಿಷ್ಠೆಗೆ ಕೂಡ ಸೀಮಿತಗೊಂಡ ಸಂಸ್ಕೃತಿಯನ್ನು ಶ್ರೀಮಂತಗೊಳಿಸುತ್ತವೆ. ಕಾವ್ಯವು ಸಮಷ್ಠಿ ಸಂಸ್ಕೃತಿ ನೆಲೆಯಿಂದ ತನ್ನನ್ನು ತಾನು ತೋರಿಸಿಕೊಳ್ಳುವಾಗಲೆಲ್ಲಾ ಅಲ್ಲಿನ ಸಮುದಾಯ ಪರಂಪರೆಗೆ, ಸಂಸ್ಕೃತಿಯ ತತ್ವಕ್ಕೆ ಬದ್ಧವಾಗಿರುತ್ತದೆ. ಮೌಖಿಕವಾಗಿ ಸಾಗಿಬಂದ ಕಾವ್ಯವು ಕಾಲದ ಬಿನ್ನಹ ವಿಷಯ ವಸ್ತುವಾಗಿರುತ್ತದೆ. ವೈವಿಧ್ಯತೆಯ ಪಠ್ಯಗಳು ಸಮುದಾಯದ ಚಹರೆಯ ಹುಡುಕಾಟವು ಆಗಿರುತ್ತವೆ. ಹಾಗೆಯೆ ಇದು ಸಮಕಾಲೀನತೆಯ ಸಮುದಾಯ ಸಂಸ್ಕೃತಿಯ ಜೀವವಾಗಿರುತ್ತದೆ. ಕಾವ್ಯದ ತಾತ್ವಿಕ ನೆಲೆ ಜನಪದೀಯ ಸಂಸ್ಕೃತಿ, ಸಮುದಾಯ ಜೀವನದ ಸೃಜನ ಶೀಲತೆಯ ಜೊತೆ ಅದು ಅಂತರ್ಗತವಾಗಿ ಸೇರಿಕೊಂಡಿದೆ. ಮೌಖಿಕ ಕಾವ್ಯವಾದ ಹಾಲುಮತ ಕಾವ್ಯವು ಸೃಜನಶೀಲತೆಯ ಪ್ರವೃತ್ತಿಯಿಂದಲೇ ಹುಟ್ಟಿಕೊಂಡವು. ಕಾವ್ಯದ ಸಂಸ್ಕೃತಿಯನ್ನು ಬೆಳೆಸಲು ಮತ್ತು ನಿಯಂತ್ರಿಸಲು ಸೃಜನಶೀಲತೆಯೇ ಬಹುದೊಡ್ಡ ಆಯುಧ.

ಕಾವ್ಯವು ಸಮುದಾಯವೊಂದರ ಸೃಷ್ಠಿ, ಬೆಳವಣಿಗೆ, ಪರಿವರ್ತನೆ, ದೈವಾಂಶಗಳ, ಪವಾಡ ಮಾಂತ್ರಿಕತೆಗಳ, ರಚನೆ, ಕಾರ್ಯನಿಷ್ಠೆ, ಭಕ್ತಿಯ ಪರವಶತೆ, ಮುಂತಾದ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಈ ಕಾವ್ಯ ತೋರಿಸಿಕೊಟ್ಟಿದೆ. ಸಂಸ್ಕೃತಿಯ ಪರಿಚಯ ಸಮುದಾಯದಲ್ಲಿ ನೋಡಬಹುದಾಗಿದೆ.

ಹಾಲುಮತ ಕಾವ್ಯದಲ್ಲಿ ಹಾಲುಮತ ಸಮುದಾಯದ ಸೃಷ್ಠಿ ಪ್ರಕ್ರಿಯೆಯಲ್ಲಿ ಸಂಸ್ಕೃತಿಯ ಚೇತನವಾಗಿ ಕಂಡುಬರುವುದು ದೇವರ ಲೀಲಾವಳಿಗಳು, ಅವರು ಮಾಡುವ ಪರೀಕ್ಷೆಗಳಲ್ಲಿ, ದೈವಾಂಶವಿರುವ ನಾಯಕ ಸಮುದಾಯದ ರಕ್ಷಣೆಯಲ್ಲಿ ಪ್ರಮುಖ ಪಾತ್ರಧಾರಿ. ಹಾಗಾಗಿ ಅವನನ್ನು ಸಾಂಸ್ಕೃತಿಕ ವೀರನೆಂದು ಕಾವ್ಯದಲ್ಲಿ ನೋಡಬಹುದಾಗಿದೆ.

ಮಹಾಕಾವ್ಯದಲ್ಲಿ ಕಂಡುಬರುವ ಸಾಂಸ್ಕೃತಿಕ ನೆಲೆಯಲ್ಲಿ ಪ್ರಮುಖ ನಾಯಕನು ದುಷ್ಟಸಂಹಾರ, ಶಿಷ್ಟರಕ್ಷಣೆ, ಕಲ್ಯಾಣಕಾರ್ಯಗಳು, ಪವಾಡಗಳು, ದೈವಾಂಶವನ್ನು ಪಡೆದುಕೊಂಡವನು. ಭಕ್ತರನ್ನು, ಶಿಷ್ಯರನ್ನು, ಪ್ರಚಾರಮಾಡಲು ಕಾರ್ಯಕೈಗೊಳ್ಳುವ ಪ್ರಯತ್ನಗಳು ಮುಂತಾದ ಅಂಶಗಳು ಸಾಂಸ್ಕೃತಿಕ ನಾಯಕನಲ್ಲಿ ನೋಡಬಹುದು. ಶ್ರೀಸಾಮನ್ಯರಿಂದ ಅವರು ಸೃಷ್ಠಿಯಾಗಿ ಪವಾಡ ಪುರುಷರಾಗಿರುತ್ತಾರೆ. ಲೋಕಕಲ್ಯಾಣಕ್ಕಾಗಿ ಅವರು ಸೃಷ್ಠಿಯಾಗಿ ಪವಾಡ ಪುರುಷರಾಗಿರುತ್ತಾರೆ. ಲೋಕಕಲ್ಯಾಣಕ್ಕಾಗಿ ಅವರು ಬರ್ಬರತೆಯ ವಿರುದ್ಧ ಹೋರಾಟಕೈಗೊಳ್ಳುತ್ತಾರೆ. ಮಹಿಳೆಯರ ಸಮಾನತೆ ಗೌರವ, ಸಮುದಾಯದ ಕರ್ತವ್ಯ, ರಕ್ಷಣೆ, ನಿಸ್ವಾರ್ಥತೆಯನ್ನು ಸಾಧಿಸಿ ಸಂಸ್ಕೃತಿಯ ವೈಭವವನ್ನು ಬಿಂಬಿಸಿದವರು ಮಹಾಕಾವ್ಯದ ನಾಯಕರು.

ಸಮುದಾಯಕ್ಕೆ ಆಚಾರ ವಿಚಾರ, ನಡವಳಿಕೆ, ಭಕ್ತಿ, ಜೀವನಕ್ರಮ, ಹೋರಾಟ ಎಲ್ಲಾ ಸೃಜನಶೀಲತೆಯ ಸಮಷ್ಠಿಪ್ರಜ್ಞೆ ತೋರಿಸಿಕೊಟ್ಟವರು. ಸಂಸ್ಕೃತಿಯ ಶ್ರೀಮಂತಿಕೆಯ ಹರಿಕಾರರು ನಾಯಕರು. ಇವರು ಸಮುದಾಯದ ರಕ್ಷಣೆಯಲ್ಲಿ ತಮ್ಮ ಪ್ರಾಣವನ್ನು ಪಣಕ್ಕೆ ಇಟ್ಟವರು. ಸಮುದಾಯದ ಜನರಿಗಾಗಿ, ಅವರ ನಂಬಿಕೆ, ಆಚರಣೆ, ಭಕ್ತಿ ಸಂಸ್ಕೃತಿಯ ಮೌಲ್ಯಗಳನ್ನು ಉಳಿಸುವುದಕ್ಕಾಗಿ ಅವರು ನಿರಂತರವಾಗಿ ಹೋರಾಡಿದವರು.

ಮೋಡಿ, ಮಾಟ, ಮಂತ್ರ ಬಲ್ಲವರಾಗಿದ್ದರು. ಸಮಸ್ತ ಜೀವಿಗಳ ಒಳಿತಿಗಾಗಿ ಜನ್ಮ ತಾಳಿದವರು ಈ ಸಾಂಸ್ಕೃತಿಕ ವೀರರು. ಸಮುದಾಯದ ರಕ್ಷಣೆಯಲ್ಲಿ ಅವನ ವೀರತ್ವ ಸಾಧನೆಯಿಂದ ಅವನನ್ನು ದೇವರಿಗೆ ಹೋಲಿಸಿ ಹಾಡುವುದು ಅವನನ್ನು ಸ್ಮರಿಸುವುದು ಸಂಸ್ಕೃತಿಯನ್ನು ಬಿಂಬಿಸುವುದಾಗಿದೆ ಕಾವ್ಯದಲ್ಲಿ.

ಹಾಲುಮತ ಕಾವ್ಯದ ಪ್ರಮುಖ ಸಾಂಸ್ಕೃತಿಕ ನೆಲೆ, ಹಾಲುಮತ ಸಮುದಾಯದ ಸೃಷ್ಠಿಗೊಳ್ಳುವುದು, ಅದು ತನ್ನ ಅಂತರ್ಗತದಲ್ಲಿ ಸಂಸ್ಕೃತಿಯ ಅಂಶಗುಣಗಳನ್ನು ಬೆಳಸಿಕೊಳ್ಳುತ್ತಾ ಸಾಗುವುದನ್ನು ಕಾವ್ಯವು ಅನೇಕ ವೃತ್ತಾಂತಗಳಲ್ಲಿ ವಿಷದ ಪಡಿಸುವುದು ನಾವು ಗಮನಿಸಬಹುದಾಗಿದೆ.[೧]

ಭೂಮಿ ನೀರಿನಿಂದ ಕೂಡಿದ್ದು, ಅದರಲ್ಲೊಂದು ಗುಳ್ಳೆ ಕಾಣಿಸಿಕೊಂಡು ಅಖಂಡೇಶ್ವರ ಸೃಷ್ಠಿಯಾಗಿ, ಆದಿಶಕ್ತಿ, ನಾದ, ಮಂತ್ರ, ಗಾಳಿ, ಬೆಳಕು ಹುಟ್ಟಿ ಭೂಮಿ ಹೆಪ್ಪುಗಟ್ಟಿ ಬಸವಣ್ಣ, ಶಂಖ, ಎಲ್ಲಮ್ಮ, ಕವಡೆಗಳು ಸೃಷ್ಠಿಯಾಗುವುದು ಕಾವ್ಯವು ಕ್ರಮಬದ್ಧವಾಗಿ ತಿಳಿಸುತ್ತದೆ. ಒಂದು ಸಂಸ್ಕೃತಿಯ ಸೃಷ್ಠಿಗೆ ದೈವ ಸೃಷ್ಠಿ ಕೂಡಿ ನಿಗೂಢವಾಗಿರುತ್ತದೆ. ರಾಕ್ಷಸರು, ಮಹದೇವರುಗಳು, ಪವಾಡಪುರುಷರು ಸೃಷ್ಠಿಯಾಗಿ, ರಾಕ್ಷಸರನ್ನು ಸಂಹಾರಮಾಡುವುದು ಕಾವ್ಯದಲ್ಲಿ ಗಮನಿಸಿದಾಗ ಒಂದು ಸೃಜನಶೀಲ ಸಂಸ್ಕೃತಿಯ ನೆಲೆಗಟ್ಟನ್ನು ನಾವು ಅಲ್ಲಿ ನೋಡಬಹುದು. ಅವುಗಳನ್ನು ಕುರಿಗಳಾಗಿ ಪರಿವರ್ತಿಸಿ, ದೇವರುಗಳೆ ಅವುಗಳನ್ನು ಸಾಕಿ ಸಲುಹಿ ನಂತರ ಧರೆಗೆ ಅವುಗಳನ್ನು ಹಾಕಿ ಅಲ್ಲಿ ಮಾನವರನ್ನು ನಿರ್ಮಿಸಿ ಅವರಿಗೆ ಹಾಲುಮತದವರೆಂದು ಕರೆಯುವುದು, ಅವರ ಸಂಸ್ಕೃತಿಯನ್ನು ಬಿಂಬಿಸುವುದಾಗಿದೆ. ಇದು ಕಾವ್ಯದಲ್ಲಿ ಬರುವ ಮೊದಲ ಹಂತದ ಸಂಸ್ಕೃತಿಯ ಸೃಷ್ಠಿಯಾಗಿದೆ. ಸಮುದಾಯವೊಂದರ ಸೃಷ್ಠಿ ದೈವೀಪವಾಡದೊಂದಿಗೆ ನಡೆಯುವುದರಿಂದ, ಸಂಸ್ಕೃತ ಅಲ್ಲಿಂದಲೆ ಸೃಷ್ಠಿಯಾಗಿ ಬೆಳೆಯುತ್ತದೆ. ಕಾವ್ಯದಲ್ಲಿ ಸಮುದಾಯವೊಂದರ ಸೃಷ್ಠಿ ಪ್ರಕ್ರಿಯೆಯಲ್ಲಿ ಸಂಸ್ಕೃತಿಯೇ ಆ ಸಮುದಾಯದ ಜೀವಾಳವಾಗಿದೆ. ಸಂಸ್ಕೃತಿಯನ್ನು ಬಿಂಬಿಸಲು ಸಮುದಾಯ ಸೃಷ್ಠಿಯಾದಂತೆ ಅಲ್ಲಿ ಕಾವ್ಯದಲ್ಲಿ ನೋಡಬಹುದಾಗಿದೆ. ಸಮುದಾಯದ ಸಾಮಾಜೀಕರಣದ ಅನನ್ಯ ಪರಿಣಾಮಗಳನ್ನು ಮಹಾಕಾವ್ಯ ಸಂಸ್ಕೃತಿಯಾಗಿ ಪರಿಣಮಿಸಿದೆ. ಅಲ್ಲಿ ಆಗುವ ಸಾಮಾಜಿಕ ಬದಲಾವಣೆಗಳು ಸಮುದಾಯದ ಸಂಸ್ಕೃತಿಯನ್ನು ಎತ್ತಿ ತೋರಿಸಲಾಗಿದೆ.

ಮಹಾಕಾವ್ಯದಲ್ಲಿ ಆದಿಮ ಪ್ರವೃತ್ತಿಗಳ ಸುಪ್ತಪ್ರಜ್ಞೆಯ ವ್ಯಕ್ತರೂಪದಲ್ಲಿ ಸಮುದಾಯದ ಬೆಳವಣಿಗೆಯಲ್ಲಿ ಸಂಸ್ಕೃತಿಯ ವೈಭವ ಸಾರಿದೆ. ಹಾಲುಮತ ಮಹಾಕಾವ್ಯದಲ್ಲಿ ಜೀವನಕ್ರಮದ, ಬಡತನದ, ಕಾಯಕದ ದಾನ-ಧರ್ಮದ, ಸತ್ಯನಿಷ್ಠೆಯ, ಭಕ್ತಿಯ, ಮನಸ್ಸಿನ ತುಮುಲಗಳು ಅನುಭವಗಳು ಸಮಷ್ಠೀಕರಣವೇ ಅಲ್ಲಿ ಬಿಂಬಿಸಿವೆ. ಇದೆಲ್ಲಾ ಆ ಕಾವ್ಯದ ಸಂಸ್ಕೃತಿಯ ನೆಲೆ ತೋರಿಸುವುದಾಗಿದೆ. ಸಮುದಾಯ ಸೃಷ್ಠಿಯಲ್ಲಿ ಜೀವನ ಮೌಲ್ಯಗಳು ತುಂಬಾ ಕಠಿಣವಾದರೂ ಅವುಗಳನ್ನು ಗೆದ್ದು ಸಾರಸತ್ವತೆಯನ್ನು ಸಾರಿಕೊಂಡು ಜೀವನ ಶ್ರೇಷ್ಠತೆಯನ್ನು ಕಾಪಾಡಿಕೊಂಡು ಸಂಸ್ಕೃತಿಯ ವೈಭವಕ್ಕೆ ಸಮುದಾಯ ನಾಂದಿಯಾಗಿರುವುದು ಕಾವ್ಯದಲ್ಲಿ ಗಮನಾರ್ಹದ ಸಂಗತಿ.

ಸಮುದಾಯದ ಸಂಸ್ಕೃತಿಯ ಶ್ರೀಮಂತಿಕೆಯನ್ನು ಕಟ್ಟಿಕೊಡುವಲ್ಲಿ ನಿಸರ್ಗವು ಕೂಡ ತುಂಬಾ ಗಮನಾರ್ಹ. ರಕ್ಷಣೆ, ಕಾಯಕ, ವಸತಿ, ಅಲೆದಾಟದಲ್ಲಿ ಆಹಾರ, ನೀರು, ತಂಪಾದಗಾಳಿ, ಭೀಕರತೆ, ಇತರೆ ಪ್ರಾಣಿಗಳ ಜೀವನ, ಅವುಗಳಿಂದ ಬದುಕುವ ಪರಿ, ಪವಾಡಗಳು, ಮುಂತಾದ ಸಂಸ್ಕೃತಿಯ ಬಹುರೂಪಗಳನ್ನು ಸೃಜನಶೀಲಗೊಳಿಸಿ ಅಸ್ತಿತ್ವವನ್ನು ಉಂಟುಮಾಡುವಲ್ಲಿ ಕಾವ್ಯ ಯಶಸ್ವಿಯಾಗಿದೆ.

129806

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕಾವ್ಯದಲ್ಲಿ ಸಮುದಾಯದ ಸಂಸ್ಕೃತಿಯ ಬೆಳವಣಿಗೆಯಲ್ಲಿ ಗಮನಾರ್ಹವಾದುದು. ಭಾವನೆಗಳು, ಕಲ್ಪನೆಗಳು, ಬಯಕೆಗಳು, ಮನಸ್ಸಿನ ನಾನಾಮುಖಗಳು ಇವು ಆ ಸಮುದಾಯದ ಸಂಸ್ಕೃತಿಯನ್ನು ಬಲಿಷ್ಠಗೊಳಿಸಲು ಪ್ರೇರಕ ಶಕ್ತಿಯಾಗಿ ಶ್ರಮಿಸಿವೆ. ಪಾತ್ರಗಳಲ್ಲಿ, ಚಿತ್ರಣಗಳಲ್ಲಿ, ಕಾವ್ಯದಲ್ಲಿ ಬರುವ ಎಲ್ಲಾ ಸನ್ನಿವೇಶಗಳು ಸಂಸ್ಕೃತಿಯ ಸಾರವನ್ನು ಹೇಳಿ ಬಯಸಿವೆ.

ಸಂಸ್ಕೃತಿಯ ಪ್ರತೀಕವಾಗಿರುವಂತದ್ದು ಪ್ರೀತಿ, ಪ್ರೇಮ, ಮಮತೆ, ಕಾಮ, ಸಂಬಂಧಗಳು, ವ್ಯವಹಾರಗಳು, ಕಾಯಕನಿಷ್ಠೆಗಳು ಇವು ಸಮುದಾಯದ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ತಂದೆ, ತಾಯಿ, ಪ್ರೀತಿ, ದೇವರಭಕ್ತಿ, ಪ್ರೇಯಸಿಯ ಪ್ರೇಮ, ಕಾಯಕ ನಿಷ್ಠೆಯ ವಿಶ್ವಾಸ, ಸಹೋದರ, ಸಹೋದರಿಯರ ಸಂಬಂಧ, ವ್ಯಾಪಾರ ವ್ಯವಹಾರಗಳು ಮುಂತಾದ ಅಂಶಗಳು ಕಾವ್ಯದಲ್ಲಿ ಸಮುದಾಯದ ಸಂಸ್ಕೃತಿ ಬಿಂಬಿಸಿವೆ.

ಮಹಾಕಾವ್ಯದ ಸಮುದಾಯದಲ್ಲಿ ಸಂಸ್ಕೃತಿಯ ನೆಲೆಯಾಗಿರುವಂತದ್ದು ಆಚರಣೆ ಮತ್ತು ವಿಸ್ತರಣೆಯ ಗುಣಗಳು. ಸಮುದಾಯದ ಸಂಸ್ಕೃತಿಯೆ ಆಚರಣೆಯಾಗಿದೆ. ಅವರು ದೇವರನ್ನು ಸ್ಮರಿಸುವುದು, ಜಾತ್ರೆ ಮಾಡುವುದು, ನಾದ-ನಗಾರಿಗಳನ್ನು ಬಾರಿಸುವುದು, ಹರಕೆ ಕಟ್ಟುವುದು, ಬಲಿನೀಡುವುದು, ಹಬ್ಬದೂಟ ಮಾಡಿ, ಹೊಸಬಟ್ಟೆ ತೊಡುವುದು, ಪರೀಕ್ಷೆ ಮಾಡುವುದು ಇವಲ್ಲದೆ ಮಾಂಸದಡುಗೆ ಮಾಡಿ ದಾನಮಾಡುವುದು, ಮದುವೆಯಾಗುವುದು, ಹಿರಿಯರನ್ನು ಮಾಡುವುದು, ದೇವರನ್ನು ನೆನೆಯುವುದು, ಮಕ್ಕಳನ್ನು ಬೆಳೆಸುವಲ್ಲಿ ಅವರಿಗೆ ಕಾಯಕದ ಮಹತ್ವವನ್ನು ತಿಳಿಸಿಕೊಡುವುದು ಹೀಗೆ ಅನೇಕ ಆಚರಣೆಗಳು ಹಾಲುಮತ ಕಾವ್ಯದಲ್ಲಿ ನಾವು ಕಾಣಬಹುದು. ಇದು ಆ ಕಾವ್ಯದ ಸಂಸ್ಕೃತಿಯ ಪ್ರತೀಕವಾಗಿದೆ. ಸಮುದಾಯದ ಸಂಸ್ಕೃತಿಯ ಆಚರಣೆಯೂ ಕೂಡ ಒಂದಾಗಿದೆ.

ವ್ಯವಹಾರ ಮಹಾಕಾವ್ಯದಲ್ಲಿ ನೋಡುವ ಮತ್ತೊಂದು ಸಾಂಸ್ಕೃತಿಕ ಅಂಶ. ಅಲ್ಲಿ ಕುರುಬ ಸಮುದಾಯದವರಾದ್ದರಿಂದ ಅವರು ಕುರಿಗಳ ಮಾರಾಟದ ವ್ಯವಹಾರ, ವ್ಯಾಪಾರ ಮನೋವೃತ್ತಿ, ಕಂಬಳಿ ಮಾರಾಟ, ದನಗಳ ಪರಿಷೆ ಮುಂತಾದ ವ್ಯವಹಾರ ಮಾಡುವುದಾಗಿದೆ. ಅಲ್ಲದೆ ಮದುವೆಯ ಸಂದರ್ಭದಲ್ಲಿ ದಾನ-ದತ್ತಿಕೊಡುವ ಸಂದರ್ಭದಲ್ಲಿ ವ್ಯವಹಾರ ಸಮುದಾಯದ ಸಂಸ್ಕೃತಿಯ ಅಂಶವಾಗಿದೆ.[೨]

ಸಂದರ್ಭಗಳು, ಸನ್ನಿವೇಶಗಳು, ದುಃಖ-ಸುಖಗಳು, ಸತ್ಯ, ನಿಷ್ಠೆಗಳು, ಘೋರ ಅನ್ಯಾಯಗಳು, ಅತ್ಯಾಚಾರಗಳು, ಅನೈತಿಕತೆ, ಅಧರ್ಮದ ಹಾದಿಗಳು, ಹಿಂಸೆಯ ನಾನಾ ಮುಖಗಳು, ಮೋಸದಾಟಗಳು, ಕಷ್ಟ-ಕಾರ್ಪಣ್ಯಗಳು ಮುಂತಾದ ಕೆಟ್ಟ ನಡೆತೆಗಳು ಕೂಡ ಸಮುದಾಯದಲ್ಲಿ ಲೀನವಾಗಿದ್ದವೆಂದು ಕಾವ್ಯ ಅಧ್ಯಯನ ಮಾಡುವಾಗ ಅರಿಯುವ ಸಂಗತಿಯಾಗುತ್ತದೆ. ಇದು ಸಂಸ್ಕೃತಿಯ ವಿನಾಶದ ಹಾದಿಯನ್ನು ತೋರಿಸುವ ಮತ್ತು ದುಷ್ಟರ ಅಟ್ಟಹಾಸವನ್ನು ಪ್ರತಿಬಿಂಬಿಸುವ ಅಂಶವನ್ನು ತೋರಿಸುವುದಾಗಿದೆ.

ಮಹಾಕಾವ್ಯದಲ್ಲಿ ಶಿವನಲೀಲೆಗಳು, ಭಕ್ತಿ, ನಯವಿನಯ, ಪವಾಡಗಳು, ದೈವಾಂಶಗುಣಗಳು, ದಾನಧ-ರ್ಮಗಳು, ಸಹೋದರತ್ವದ ಗುಣಗಳು ಅನೇಕ ಸತ್ಯ ಸಂದರ್ಭಗಳು ಕಾವ್ಯದ ಸಂಸ್ಕೃತಿಯನ್ನು ಕಾವ್ಯದಲ್ಲಿ ಎತ್ತಿ ಹಿಡಿದಿದ್ದಾವೆ.

ಕಾವ್ಯದಲ್ಲಿ ಬರುವ ಪಾತ್ರಗಳು ಅವುಗಳಲ್ಲಿ ಸ್ತ್ರೀಪಾತ್ರಗಳು ಸಂಸ್ಕೃತಿಯ ಮಾತೃವಾಗಿ ನೆಲೆನಿಂತಿವೆ. ಹಾಲುಮತದವರ ಸೃಷ್ಟಿ, ಅವರ ಬೆಳವಣಿಗೆ, ಬೀರಪ್ಪನ ಸೃಷ್ಟಿ, ಮಾಯವ್ವಳ ಪ್ರೀತಿ, ವಿಶ್ವಾಸ, ನಂಬಿಕೆ, ಶಿಷ್ಠರಾದ ಮಾಳಿಂಗರಾಯನ ಒಡನಾಟ ಮುಂತಾದ ಪಾತ್ರಗಳಲ್ಲಿ ಸ್ತ್ರೀಪಾತ್ರಗಳು ಕಾವ್ಯದ ಸಂಸ್ಕೃತಿಯ ವೈಭವವನ್ನು ತೋರಿಸಿ ಕೊಟ್ಟಿದ್ದಾವೆ.

ಪುರುಷಪಾತ್ರಗಳು ಸಮುದಾಯದ ರಕ್ಷಣೆಯಲ್ಲಿ, ಸಮುದಾಯದ ಬೆಳವಣಿಗೆಯಲ್ಲಿ, ಸಮುದಾಯದ ಸ್ಮೃತಿಯಲ್ಲಿ, ದೇವರ ಅನುಗ್ರಹದಂತೆ ದೈವಾಂಶವುಳ್ಳವರಾಗಿ ಸಮುದಾಯದ ಉಳಿವಿಗಾಗಿ ನಾನಾ

ಕಷ್ಟಕಾರ್ಪಣ್ಯಗಳು ಬಂದವೆಂದು ಹೆದರದೆ, ಬೆದರದೆ, ಸಂಸ್ಕೃತಿಯನ್ನು ಉಳಿಸಿ, ಬೆಳಸುವಲ್ಲಿ ಅವರ ಪಾತ್ರ ಅಮೋಘವಾದುದು. ಸಮುದಾಯದ ಸಂಸ್ಕೃತಿಯ ಜೀವಾಳವಾದುದು.

ಸಮುದಾಯದಲ್ಲಿನ ಗತಕಾಲದ ಸನ್ನಿವೇಶಗಳನ್ನು, ಸಮಕಾಲೀನದಲ್ಲಿ ಅದರ ಸನ್ನಿವೇಶದ ಸಂಸ್ಕೃತಿಯನ್ನು ಉಳಿಸಿ, ಬೆಳೆಸುವಲ್ಲಿ ಸಮುದಾಯ ಶಾಶ್ವತವಾಗಿ, ಅಜಾರಮರವಾಗಿ ಉಳಿದು, ಬೆಳೆದುಕೊಂಡು ಬಂದಿವೆ. ಬಹುರೂಪಿ ಸಮಾಜದಲ್ಲಿ ವಿಭಿನ್ನ ನಿರ್ವಚನೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಸಮಾಜದಲ್ಲಿ ತಾನು, ತನ್ನ ಕರ್ತವ್ಯ ಮರೆಯದೆ ತನ್ನ ಸಂಸ್ಕೃತಿಯನ್ನು ಸಮುದಾಯ ಉಳಿಸಿರುವುದು ಅದರ ಸಂಸ್ಕೃತಿಗೆ ಗರಿ ಇಟ್ಟಂತಾಗುತ್ತದೆ. ಸಮುದಾಯದ ಪೂರ್ವಕಾಲದ ಇತಿಹಾಸವನ್ನು ಪ್ರಾದೇಶಿಕ ಹಿನ್ನೆಲೆಯಲ್ಲಿ ಸಾಮಾಜಿಕ ಜೀವನದಲ್ಲಿ ಭಾಗವಹಿಸಿ ಅದು ತನ್ನ ಕುರುಹನ್ನು ಉಳಿಸಿಕೊಂಡಿದೆ. ಇದಕ್ಕೆ ಗಮನಾರ್ಹ ಕಾರಣ ಸಂಸ್ಕೃತಿಯ ಸಂಬಂಧ. ಇದು ಅದರ ಜೀವಾಳವಾಗಿರುವುದರಿಂದ ಇತಿಹಾಸ ಕೂಡ ಹಚ್ಚಹಸಿರಾಗಿದೆ ಸಮುದಾಯದಲ್ಲಿ.

ಸೃಜನಶೀಲತೆಯಲ್ಲಿ ಆದಿಮ ಪ್ರವೃತ್ತಿಗಳಿಗೆ ಸಮುದಾಯ ಮರಳಿ ತನ್ನ ಸಂಸ್ಕೃತಿಯ ಅಸ್ತಿತ್ವವನ್ನು ಹೊಸ ಜಗತ್ತಿನ ಅರಿವಿಗೆ ಜೊತೆಗೆ ಅನುಸಂಧಾನಗೊಳಿಸಿಕೊಂಡಿದೆ. ಬೇರೆ ಸಮುದಾಯಗಳಲ್ಲಿರುವ ಸೃಜನಶೀಲತೆಯನ್ನು ಹಾಲುಮತ ಸಮುದಾಯ ಕೂಡ ಉಳಿಸಿಕೊಂಡಿದೆ. ಪರಂಪರೆಯ ಶ್ರೀಮಂತಿಕೆಯನ್ನು ಅದು ಮೆರೆದಿದೆ. ಪುರಾತನ ಪರಂಪರೆಯ ಇತಿಹಾಸ ಅದಕ್ಕೆ ಇರುವುದರಿಂದ ಸಂಸ್ಕೃತಿಯನ್ನು ವಿನಾಶಮಾಡಿಕೊಳ್ಳದೆ ಹೊಸಜಗತ್ತಿನೊಂದಿಗೆ ತನ್ನ ಅಸ್ತಿತ್ವವನ್ನು ಪರಿಚಯ ಮಾಡಿಕೊಳ್ಳುತ್ತದೆ. ಹೊಸ ತಂತ್ರಜ್ಞಾನ, ಜೀವನಶೈಲಿ, ವ್ಯಾಪಾರ ಮನೋವೃತ್ತಿ, ಬದಲಾಗುತ್ತಿರುವ ಬದುಕು ಎಲ್ಲಾ ಇದ್ದರೂ ಸಮುದಾಯ ಮಾತ್ರ ಸಂಸ್ಕೃತಿಯ ಕುರುಹು ಉಳಿಸಿಕೊಳ್ಳಬೇಕೆಂಬ ತೀವ್ರ ಬಯಕೆ ಹೊಂದಿದೆ. ಹಾಗಾಗಿ ಅದು ತನ್ನ ಪರಂಪರೆಯನ್ನು ಇನ್ನು ಜೀವಂತವಾಗಿಟ್ಟುಕೊಂಡಿದೆ.

ಧಾರ್ಮಿಕ ಪ್ರಭುತ್ವವು ರೂಪಿಸಿದ ತಾರತಮ್ಯಗಳ ಜೊತೆಗಿನ ಒಪ್ಪಂದ ಮತ್ತು ಪ್ರತಿರೋಧಗಳ ವೈರುಧ್ಯದ ಮಧ್ಯೆ ಹಾಲುಮತ ಸಮುದಾಯದ ಸಂಸ್ಕೃತಿ ಮಹಾತಾಯಿಯಂತೆ ಪ್ರವಹಿಸುತ್ತಿದೆ. ಅದು ಯಾವ ತಾರತಮ್ಯ ಮಾಡದೆ ಯಾವುದೇ ಒಪ್ಪಂದ ಮಾಡಿಕೊಳ್ಳದೆ, ಪ್ರತಿರೋಧಕಟ್ಟದೆ, ಸಮಾನತೆಯ ಹಾದಿಯಲ್ಲಿ ಸಮುದಾಯ ಬೆಳೆಯುತ್ತದೆ, ಜೀವಿಸುತ್ತದೆ. ಇದು ಅದರ ಸಂಸ್ಕೃತಿಯನ್ನು ತಿಳಿಗೊಳಿಸುತ್ತದೆ.

ಹೀಗೆ ಹಾಲುಮತ ಮಹಾಕಾವ್ಯದ ಸಾಂಸ್ಕೃತಿಕ ನೆಲೆಯು ಭದ್ರವಾದುದು. ಶ್ರೀಮಂತಿಕೆಯಿಂದ ಕೂಡಿರುವಂತದ್ದು. ಅದು ತನ್ನ ಗರ್ಭದೊಳಗೆ ಎಲ್ಲಾ ಪರಂಪರೆಗಳ ಆಚರಣೆ ನಂಬಿಕೆಗಳು, ಸೃಜನಶೀಲ ನೆಲೆಯ ಸಮಷ್ಠಿಪ್ರಜ್ಞೆಯ ನಾನಾ ಮುಖಗಳನ್ನು ಅದು ಇಟ್ಟುಕೊಂಡಿದೆ. ಸಮುದಾಯದ ಸಮಸ್ತ ನಂಬಿಕೆಯ ಸಂಬಂಧಗಳು, ಆಚರಣೆಗಳು ಎಲ್ಲಾ ಸಂಸ್ಕೃತಿಯ ಪ್ರತೀಕವಾಗಿವೆ. ಹೀಗಾಗಿ ಸಾಂಸ್ಕೃತಿಕನೆಲೆ ಹಾಲುಮತ ಮಹಾಕಾವ್ಯದಲ್ಲಿ ಸಮುದ್ರದಂತೆ ವಿಸ್ತಾರವಾಗಿ ಹರಡಿಕೊಂಡಿದೆ ಕಾವ್ಯದ ತುಂಬೆಲ್ಲಾ. ಏಕೆಂದರೆ ಸಂಸ್ಕೃತಿಯೆ ಮಹಾಕಾವ್ಯದ ಸೃಷ್ಠಿಯಾಗಿದೆ.

**ಅಡಿ ಟಿಪ್ಪಣಿಗಳು**

೧. ಬ. ಪ. ನಾಯ್ಕರ ಅವರ **ಹಾಲುಮತಸ್ಥರು** ಪುಸ್ತಕದಲ್ಲಿರುವ ಹಿನ್ನೆಲೆಯ ಆಧಾರವನ್ನು ಗಮನಿಸಿ ಅವಲೋಕನ ಮಾಡಿ ಹಾಲುಮತಸ್ಥರ ಸಾಂಸ್ಕೃತಿಕ ಅಂಶಗಳನ್ನು ವಿವರಿಸಲಾಗಿದೆ.

೨. ಡಾ. ವೀರಣ್ಣ ದಂಡೆ, (ಸಂ.), **ಜನಪದ ಹಾಲುಮತ ಮಹಾಕಾವ್ಯ**, ಪು. ೩೫

ಜನಪದ ಲೋಕ ಇಂದು ತನ್ನ ವೈಭವವನ್ನು ಸಾರಿಕೊಳ್ಳುತ್ತದೆ. ಏಕೆಂದರೆ ನಮ್ಮ ದೇಶದ ಸಂಸ್ಕೃತಿ, ಅದರ ಇತಿಹಾಸದ ಪರಂಪರೆ, ಸಾಮಾಜಿಕ ರಚನೆ, ಆಚರಣೆಗಳ ರೀತಿ ನೀತಿ, ಹೀಗೆ ಹತ್ತು ಹಲವು ಮುಖಗಳಲ್ಲಿ ಭಿನ್ನವಾದುದು ನಮ್ಮ ದೇಶ. ಇತರೆ ದೇಶಗಳೊಂದಿಗೆ ನಮ್ಮ ದೇಶದ ಸಂಸ್ಕೃತಿಯ ಹೋಲಿಕೆ ಮಾಡಿದರೆ ನಮ್ಮ ದೇಶದ ಸಂಸ್ಕೃತಿಯೇ ಅತ್ಯಂತ ಶ್ರೀಮಂತವಾದುದು. ಇಂತಹ ಸಂಸ್ಕೃತಿಯನ್ನು ಹೊಂದಿದ ನಮ್ಮ ದೇಶದ ಪರಂಪರೆಯನ್ನು ಉಳಿಸುವ ಯತ್ನದಲ್ಲಿ ಸಾಹಿತ್ಯದಲ್ಲಿ ಅವಿರತ ಸಂಶೋಧನಾತ್ಮಕ ಕ್ರಿಯಾಚಟುವಟಿಕೆಗಳು ನಡೆದುಕೊಂಡುಬಂದವು. ಮೌಖಿಕ ಸಾಮ್ರಾಜ್ಯದ ಕಂಠಸ್ಥ ಲೋಕದ ಜನಪದರ ಸಾಹಿತ್ಯವನ್ನು ಒಟ್ಟಾರೆಯಾಗಿ ಕಟ್ಟಿಕೊಡುವಲ್ಲಿ ಅನೇಕ ವಿದ್ವಾಂಸರು, ವಿಮರ್ಶಕರು, ಸಂಶೋಧಕರು ಅವಿರತ ಶ್ರಮದ ಕೊಡುಗೆಯಾಗಿದೆ.

ಅವರ ಜನಪದ ಲೋಕದ ಸಾಹಿತ್ಯದ ಹಲವು ಮುಖಗಳು ವಿಭಿನ್ನ. ಅನೇಕ ಸಂಸ್ಕೃತಿಗಳ ಸಾರ ವೈವಿಧ್ಯ, ಸಾಮಾಜಿಕ ಹಿನ್ನೆಲೆಗಳನ್ನು ಹೊಂದಿಕೊಂಡು ಬೆಳೆದಿರುವಂತಿದ್ದು, ಅಂತಹ ಸಾಹಿತ್ಯವನ್ನು ಹಲವು ಪ್ರಕಾರಗಳಾಗಿ, ವರ್ಗೀಕರಿಸಿಕೊಂಡು ಬೆಳೆದಿರುವಂತದ್ದು, ಅಂತಹ ಸಾಹಿತ್ಯವನ್ನು ಹಲವು ಪ್ರಕಾರಗಳಾಗಿ, ವರ್ಗೀಕರಿಸಿಕೊಂಡು ಪ್ರತ್ಯೇಕವಾಗಿ ಅವುಗಳ ಅಧ್ಯಯನ ಪ್ರಾರಂಭವಾಯಿತು. ಅವುಗಳಲ್ಲಿ ಪ್ರಮುಖವಾದುದು ಕಾವ್ಯ. ಇದು ಕಾವ್ಯ, ಹಾಡು, ಖಂಡಕಾವ್ಯ, ಮಹಾಕಾವ್ಯವೆಂಬ ಹಲವು ನಾಮಧೇಯಗಳನ್ನು ಜನಪದರ ಹೃದಯಗಳಲ್ಲಿ ಕೇಳಿಬಂದಿರುವಂತದ್ದು ಕಾವ್ಯಲೋಕ. ಇಂದು ತನ್ನ ಛಾಪನ್ನು ಜನಪದಲೋಕದಲ್ಲಿ ಅತ್ಯಂತ ಗಂಭೀರವಾಗಿ ಉಳಿಸಿಕೊಂಡಿದೆ.

ಕಾವ್ಯಪ್ರಪಂಚವನ್ನು ಸೃಷ್ಟಿಮಾಡಿ ಅದರ ಪರಂಪರೆ, ಇತಿಹಾಸ, ಮೂಲವನ್ನು ಉಳಿಸಿ, ಬೆಳೆಸಿ ಇಂದು ಅದನ್ನು ಸಾಹಿತ್ಯಲೋಕದಲ್ಲಿ ಸಂಶೋಧನಾತ್ಮಕ ಅಧ್ಯಯನದಲ್ಲಿ ತೊಡಗಿಸಿಕೊಂಡಿರುವುದರಿದ ಅವುಗಳಿಂದ ಸಮಾಜದ ಅನೇಕ ಸಮುದಾಯಗಳ ಸಂಸ್ಕೃತಿ, ಜೀವನಶೈಲಿ ಮುಂತಾದವನ್ನು ಅರಿಯಬಹುದಾಗಿದೆ. ಅಂತಹ ಪ್ರಯತ್ನ ಕೂಡ ಇಲ್ಲಿ ಮಾಡಲಾಗಿದೆ. ಮಹಾಕಾವ್ಯದ ರೂಪ ಶಿವನಾಗಿದ್ದು ಸಂಕೇತವು ಭಕ್ತಿಯಾಗಿದ್ದು, ಪ್ರತಿಮೆಯು ಹಾಲುಮತ ಸಮುದಾಯವಾಗಿದೆ.

ಮಹಾಕಾವ್ಯದಲ್ಲಿ ಅತ್ಯಂತ ಪ್ರಮುಖವಾದುದು 'ಹಾಲುಮತ ಮಹಾಕಾವ್ಯ.' ಇದು ಹಾಲುಮತ ಸಮುದಾಯದ ಜೀವನಕ್ರಮದ ಒಟ್ಟು ನೋಟವನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದೆ.

ಹಾಲುಮತ ಮಹಾಕಾವ್ಯದ ಬಹುಮುಖ್ಯ ರೂಪಕ ಶಿವನ ಲೀಲಾ ಸನ್ನಿವೇಶಗಳು. ಕಾವ್ಯದ ತುಂಬಾ ಅಡಕಗೊಂಡಿವೆ. ಕಾವ್ಯದ ಚೇತನವೇ ಶಿವಪಾರ್ವತಿಯರ ಲೀಲೆಗಳಾಗಿವೆ. ಅವರ ಲೀಲೆಯಿಂದ ಜನಿಸಿದ ಅನೇಕ ಮಾನವ ಶರೀರದ ದೈವಾಂಶ ಜೀವಾಳ ತುಂಬಿರುವ ನರರು ಪವಾಡ ಪುರುಷರಾಗಿದ್ದಾರೆ. ಅವರು ತಮ್ಮ ಪವಾಡಗಳಿಂದ ಶರಣರಾಗಿ ಭೂಲೋಕದ ಮೌಢ್ಯಗಳನ್ನು ತೊಳೆದು ಅಲ್ಲಿ ನಿಜ ಜೀವನದ ಸಂದೇಶ ಸಾರುವಲ್ಲಿ ಅವರು ಶ್ರಮವಹಿಸಿದ್ದಾರೆ.

ಹಾಲುಮತ ಕಾವ್ಯದ ಸೃಷ್ಟಿಯಾಗಿದ್ದು ದೇವತೆಗಳ ಅನುಗ್ರಹದಿಂದ. ರಾಕ್ಷಸರ ದಬ್ಬಾಳಿಕೆ, ಮೋಸ, ಬೀಬತ್ಸ ಕೃತ್ಯಗಳನ್ನು ಕಡೆಗಾಣಿಸಲು ಅವರನ್ನು ಸಂಹಾರಮಾಡಲು ದೇವತೆಗಳು ನಿರ್ಧರಿಸಿ ಅದರಂತೆ ರಾಕ್ಷಸರನ್ನು ಸಂಹಾರಮಾಡಿ ಅವರನ್ನು ಮೂಕ ಪ್ರಾಣಿಗಳಾಗಿ ಪರಿವರ್ತಿಸಿ ಕುರಿಗಳನ್ನು ಮಾಡಿ ಅವುಗಳ ರಕ್ಷಣೆಗೆ, ಉಳಿವಿಗೆ ರಕ್ಷಕನನ್ನು ದೇವತೆಗಳು ನಿರ್ಮಿಸಿದರು. "ರಾಕ್ಷಸರು ಮಾಡಿದ ಹಲವು ದುಷ್ಟಕೃತ್ಯಗಳ ಪಾಪದ ಫಲವೇ ಕುರಿ ಜನ್ಮಕ್ಕೆ ಕಾರಣ"ವೆಂದು ಇಂದಿಗೂ ಜನಪದರ ದೃಷ್ಟಿಯಲ್ಲಿ ನಂಬಿಕೆಯಾಗಿ ಉಳಿದಿದೆ. ಕಾವ್ಯದ ಅನೇಕ

ರೂಪಕಗಳು ಅಂದರೆ ವಸ್ತು ವೈವಿಧ್ಯತೆಯಿಂದ ಕೂಡಿದೆ. ಎಲ್ಲಾ ಸಮುದಾಯದ ರಕ್ಷಣೆಗೆ, ಬೆಳವಣಿಗೆಗೆ ಅದರ ಮಹತ್ವ ಉಳಿಸಲು ಮಾಡಿದಂತ ಸಾವಿರಾರು ಕಾರ್ಯಗಳು ಕಾವ್ಯದ ಮುಖ್ಯ ರೂಪಕವಾಗಿ ಬೆಳೆದುಕೊಂಡಿದೆ. ಅವುಗಳ ವಿಶ್ಲೇಷಣೆಯನ್ನು ಮುಂದೆ ಈ ರೀತಿಯಾಗಿ ನೀಡಲಾಗಿದೆ.

ಮಹಾಕಾವ್ಯದಲ್ಲಿ ಪ್ರಮುಖವಾಗಿ ರೂಪಗೊಂಡಿರುವ ರೂಪಕಗಳು ಸಂಸ್ಕೃತಿಯ ಜೀವಾಳವಾಗಿ ರೂಪುಗೊಂಡಿವೆ. 'ಭಕ್ತಿ'ಕಾವ್ಯದಲ್ಲಿ ತುಂಬಾ ಹರಡಿಕೊಂಡಿದೆ. ಭಕ್ತಿಯಿಂದ ಶಿವನ ಪೂಜೆಮಾಡುವುದು ಬೀರಪ್ಪನನ್ನು ಭೂಲೋಕದ ಶಿವನೆಂದು ಪೂಜೆ ಮಾಡಿ ತಮ್ಮ ಇಷ್ಟಗಳನ್ನು ಪೂರೈಸುವಂತೆ ಕೇಳಿಕೊಳ್ಳುವುದನ್ನು ಕಾವ್ಯದಲ್ಲಿ ಮನಗಾಣಬಹುದಾಗಿದೆ. ಅಲ್ಲದೆ ಭಕ್ತಿಯಿಂದ ಸಮೃದ್ಧ ಜೀವನಸಾಗಿಸಿರುವುದನ್ನು ಕಾವ್ಯದಲ್ಲಿ ನೋಡಬಹುದು. ಗುರುಗಳಿಗೆ ವಿಧೇಯರಾಗಿದ್ದು, ಶಿಷ್ಯರಾಗಿ ಜೀವನ ಸಾರ್ಥಕತೆಗೊಂಡಿರುವುದನ್ನು ಕಾವ್ಯದಲ್ಲಿ ಹೇರಳವಾಗಿ ಕಾಣಬಹುದಾಗಿದೆ.

ಮಹಾಕಾವ್ಯದಲ್ಲಿ ಕಾಯಕ ಸಮುದಾಯದ ಉಸಿರಾಗಿ, ಅವರ ಜೀವನವಾಗಿರುವುದನ್ನು ಕಾಣಬಹುದಾಗಿದೆ. ಕೇವಲ ಕುರಿಗಳನ್ನು ಕಾಯದೆ ದನಗಳನ್ನು, ಎಮ್ಮೆಗಳನ್ನು, ಹಸುಗಳನ್ನು, ಸಾಕಿ ಸಲುಹಿ ಅವುಗಳಿಂದ ತಮ್ಮ ಜೀವನ ಸಮೃದ್ಧಿಗೊಂಡಿರುವುದನ್ನು ಅವುಗಳ ರಕ್ಷಣೆಗಾಗಿ ದೇವರುಗಳಿಗೆ ಹರಕೆ ಹೊತ್ತಿರುವುದು ಕಾವ್ಯದಲ್ಲಿ ಅಲ್ಲಲ್ಲಿ ಮೂಡಿ ಬಂದಿರುವುದನ್ನು ಗಮನಿಸಿಬಹುದು.

ಮಹಾಕಾವ್ಯದಲ್ಲಿ ಸಮುದಾಯದ, ಜಾತಿಯೊಂದರ ಸಂಸ್ಕೃತಿಯನ್ನು ನೋಡಬಹುದು. ಅವರ ಜೀವನಶೈಲಿ, ಉಡುಗೆ-ತೊಡುಗೆ, ಭಾಷೆ, ಆಚರಣೆ, ಪರೀಕ್ಷೆಗಳನ್ನು ಮಾಡುವುದು, ಸಂಬಂಧಗಳು, ಗೌರವ ಪ್ರೀತಿ ಸಂಪಾದನೆ ಮಾಡುವುದನ್ನು ಮಹಾಕಾವ್ಯದಲ್ಲಿ ಸಮುದಾಯದ ಸಂಸ್ಕೃತಿಯನ್ನು ಬಿಂಬಿಸಿರುವುದು ಗಮನಾರ್ಹವಾಗಿ ರೂಪುಗೊಂಡಿದೆ.

ಮಹಾಕಾವ್ಯದಲ್ಲಿ ವ್ಯವಹಾರ, ಪವಾಡಗಳು, ದುಶ್ಚಟಗಳು, ಉಪಕಾಯಕ ಕಸುಬುಗಳು ಮುಂತಾದವು ಸಮುದಾಯದ ರೂಪವಾಗಿ ನೆಲೆ ನಿಂತಿವೆ. ಸಮುದಾಯದ ರೂಪವಾಗಿ ಅದರ ಜೀವಾಳವಾಗಿ ಅನೇಕ ಅಂಶಗಳು ಕಾರಣವಾಗಿವೆ. ಸ್ತ್ರೀಯರು, ಪುರುಷರು, ಅನ್ಯರು ಇತರರು ಅವರ ಒಡನಾಟ ಸಂಬಂಧಗಳು ಕಾವ್ಯದ ರೂಪವಾಗಿ ಮೈತಳೆದಿವೆ.

**ಸಂಕೇತಗಳು**

ಹಾಲುಮತ ಮಹಾಕಾವ್ಯಕ್ಕೆ ಇತಿಹಾಸ, ಪರಂಪರೆ, ಮೂಲಸ್ಮೃತಿ, ಪ್ರಬುದ್ಧತೆ ಎಲ್ಲಾ ಕಾವ್ಯದ ಸೃಷ್ಠಿಯ ಸಂಕೇತಗಳಾಗಿವೆ. ಏಕೆಂದರೆ ಒಂದು ಉಗಮವಾಗಲು ಅದಕ್ಕೊಂದು ಸೃಷ್ಠಿಕರ್ತರು ಕಾರಣ. ಉಗಮವಾದ ಮೇಲೆ ಅದರ ಇತಿಹಾಸ ಪ್ರಾರಂಭವಾಗುತ್ತದೆ. ನಂತರ ಬೆಳೆದುಕೊಂಡು ಬಂದಂತ ಪರಂಪರೆ, ಪರಂಪರೆಯ ಮೂಲ ಸಂಸ್ಕೃತಿಯ ನಾನಾಮುಖಗಳು ಅಲ್ಲಿ ಮೈದಳೆಯುತ್ತವೆ. ಇವು ವಿಷಯದ ಸಮೃದ್ಧ ಸಂಕೇತಗಳಾಗುತ್ತವೆ.

'ಹಾಲುಮತ' ಇದರ ಇತಿಹಾಸವೇ ವಿಶಿಷ್ಟವಾದುದು. ಹಾಲು ಮತ್ತು ಮಣ್ಣಿನಿಂದ ತಯಾರಾದಂತವರು ಹಾಲುಮತಸ್ಥರು ಎಂಬ ವಿಷಯ ಕಾವ್ಯದಲ್ಲಿ ನೋಡಬಹುದು. ಬ್ರಹ್ಮನು ಚಿಂತೆಗೀಡಾಗಿ ಸೃಷ್ಠಿಯ ಏರುಪೇರುಗಳನ್ನು ಗಮನಿಸಿ ಬಹುನೊಂದು ಕುಳಿತಿರುವಾಗ ಶಿವನು ಮತ್ತು ಇತರೆ ಮಹಾದೇವತೆಗಳು ಇದನ್ನು ಆಲಿಸಲು ಅದರ ಮಹತ್ತರ ವಿಷಯಗಳ ಬಗ್ಗೆ ಅರಿತು ಭೂಲೋಕದಲ್ಲಿ ಶಾಂತಿ ಕಾಪಾಡಲು ಅವರು ಮರುಸೃಷ್ಠಿಯಾದರು. ಇದು ಭೂಲೋಕದ ಶಾಂತಿ ಕಾಪಾಡುವ ಸಂಕೇತವಾಗಿದೆ.

ಭೂಲೋಕದಲ್ಲಿ ಎಲ್ಲರು ಉದ್ಭವಿಸಿ ಅದನ್ನು ಸ್ವರ್ಗಲೋಕಕ್ಕೆ ಹೋಲಿಕೆಮಾಡಿದಾಗ ರಾಕ್ಷಸರು ತಾಂಡವಾಡುತ್ತಿದ್ದರು. ಅವರನ್ನು ಸಂಹರಿಸಿ ಪಾಪಕ್ಕನುಗುಣವಾಗಿ ಅವರನ್ನು ಕುರಿಗಳನ್ನಾಗಿ ಸೃಷ್ಠಿಸಿ ಎಲ್ಲರು ಅವುಗಳನ್ನು ರಕ್ಷಿಸಿದರು. ಆದರೆ ಕೊನೆಗೆ ಎಲ್ಲರ ಸರದಿ ಮುಗಿದ ಮೇಲೆ ಪಾರ್ವತಿ ಅವುಗಳನ್ನು ಸಂರಕ್ಷಿಸಿ ಅಂದರೆ ಹುತ್ತಿನಲ್ಲಿ ಎಲ್ಲವನ್ನು ಅಡಗಿಸುವುದು ಅವುಗಳ ರಕ್ಷಣೆಗೆ ತಾನು ತಯಾರಿಸಿದ ಮಣ್ಣುಗೊಂಬೆಗಳಿಗೆ

(ಹಾಲು ಮತ್ತು ಮಣ್ಣು) ಶಿವನು ಜೀವತುಂಬುವನು. ಅವು ಮುಂದೆ ಕುರಿಗಳ ರಕ್ಷಣೆಯಲ್ಲಿ ತೊಡಗಿದವು. ಇಲ್ಲಿ ರಕ್ಷಣೆ, ಸಂರಕ್ಷಣೆ, ಸೃಷ್ಠಿ, ಪಾಪದ ಮೂಲ, ದೇವತೆಗಳ ಅನುಗ್ರಹ ಎಲ್ಲ ಸಂಕೇತವಾಗಿ ಒಳಗೊಂಡಿವೆ.

ಮುಂದೆ ಅವರದೇ ಆದ ಒಂದು ಸಮುದಾಯವನ್ನು ಸೃಷ್ಟಿಸಿಕೊಂಡು, ಸಂಸ್ಕೃತಿಯ ವೈಭವವನ್ನು ಸಾರಿಕೊಂಡಿರುವುದನ್ನು ಕಾವ್ಯದ ತುಂಬೆಲ್ಲ ಕಾಣಬಹುದಾಗಿದೆ.

ಕಾವ್ಯದ ತುಂಬಾ ಹರಡಿಕೊಂಡಿರುವ ಸಂಕೇತಗಳು, ಜನಪದರ ಭಾಷೆಯು ಜೀವನದ, ಜೀವಿಸುವ, ಭಾವುಕತೆಯ, ಸಂಸ್ಕೃತಿಯ ಪ್ರತೀಕಗಳನ್ನು ಅದು ಪರಿಚಯ ಮಾಡಿಕೊಡುತ್ತದೆ. ಏಕೆಂದರೆ ಕಾವ್ಯದ ತುಂಬಾ ಹರಡಿಕೊಂಡಿರುವುದು, ಭಕ್ತಿ, ಉಪಾಸನೆ, ಪವಾಡ, ಶರಣರ ಸಾಧನೆ, ಶಿಷ್ಯರ ಆದರ್ಶಗಳು, ಜೀವಿಸುವ ಕಾಯಕ ಪ್ರವೃತ್ತಿಗಳು. ಸಮುದಾಯದ ಜೀವನಕ್ರಮ. ಸಮುದಾಯದ ವ್ಯಾಪಾರತ್ಮಕ ಗುಣಗಳು, ವ್ಯವಹಾರ, ಕೃಷಿ, ಹೈನುಗಾರಿಕೆ, ಸಾಕಾಣಿಕೆ, ಕಾಯಕದ ಜೀವನನಿರ್ವಹಣೆ, ದಾನಧರ್ಮ, ಜಾತ್ರೆಮಾಡುವುದು, ಸ್ತ್ರೀಯರಿಗೆ ಗೌರವ, ಪ್ರೀತಿ, ಮಮತೆ, ಉದಾರತೆ ನೀಡುವುದು, ಮಕ್ಕಳ ಪೋಷಣೆ, ಅವರಿಗೆ ಸಮುದಾಯ ಸಂಸ್ಕೃತಿಯ ಇತಿಹಾಸ ಪರಿಚಯಿಸಿಕೊಡುವುದು, ಅವರನ್ನು ಭಕ್ತಿಯ ಕಡೆ ಕೇಂದ್ರೀಕರಿಸುವುದು, ಶರಣರ ಜೀವನದ ವೃತ್ತಾಂತಗಳನ್ನು ಪರಿಚಯಮಾಡಿಕೊಡುವುದು, ತ್ಯಾಗ ಬಲಿದಾನ, ವೀರ, ಶೂರರ ಮಹಾತ್ಮರ ಚರಿತ್ರೆ ಅರಿತು, ಅವರಂತೆ ಸಾಮಾನ್ಯರು ಜೀವಿಸುವುದು. ಸಂಸ್ಕೃತಿಯ ವೈಭವವನ್ನು ಸಾರುವುದು. ಸಂಘಟನೆ, ಸಂಬಂಧಗಳನ್ನು ದೃಢಗೊಳಿಸುವುದು. ಸಮುದಾಯದ ಪರಂಪರೆಯನ್ನು ಉಳಿಸಿ-ಬೆಳೆಸಿಕೊಂಡು ಇಂದಿಗೂ ಬಂದಿರುವಂತದ್ದು ಮಹಾಕಾವ್ಯದ ಸಂಕೇತಗಳ ರೂಪಾಗಿ ಹರಡಿಕೊಂಡಿವೆ. ಅವು ಗೋಚರಿಸದೇ ಇದ್ದರೂ ಅವು ಕಾವ್ಯದೊಳಗೆ ಸಂಕೇತದ ರೂಪಗಳಾಗಿ ತುಂಬಿಕೊಂಡಿವೆ.

ಹೀಗೆ ಮಹಾಕಾವ್ಯದ ಸಂಕೇತಗಳು ಒಳ್ಳೆ ಆದರ್ಶಮಯ ಸಂಸ್ಕೃತಿಯನ್ನು ಸಮುದಾಯದಲ್ಲಿ ತೋರಿಸುವ ಪ್ರಕ್ರಿಯೆ ತುಂಬಾ ಗಮನಾರ್ಹವಾಗಿದ್ದು, ನಾನಾ ಮುಖಗಳಲ್ಲಿ ಕಾವ್ಯ ಹರಿದುಕೊಂಡು ಬಂದರೂ ಅದರ ಸಂಕೇತ ಮಾತ್ರ ಒಂದೇಯಾಗಿದೆ. ಅದು ಭಕ್ತಿ, ಶಿವನಲೀಲೆಯ ವೈಭವ, ಕಾಯಕ, ಆದರ್ಶ ಇವು ಕಾವ್ಯದ ಮುಖ್ಯ ಸಂಕೇತಗಳು.

**ಪ್ರತಿಮೆಗಳು**

ಮಹಾಕಾವ್ಯದಲ್ಲಿ ಅನೇಕ ರೂಪವಸ್ತುಗಳು ತುಂಬಿಕೊಂಡಂತೆ ಅನೇಕ ಸಂಕೇತಗಳು ಹೇರಳವಾಗಿವೆ. ಇವೆಲ್ಲಾ ಸೃಷ್ಠಿಯಾಗಲು ಪ್ರಮುಖವಾದುದು ಪ್ರತಿಮೆಗಳು, ಪವಾಡ ದೃಶ್ಯಗಳು, ಲೀಲೆಗಳು, ಭಕ್ತಿಯ ಪರವಶತೆ, ನಂಬಿಕೆ ಪ್ರಮುಖವಾದುದಾಗಿದೆ. ಇದರಿಂದ ಕಾವ್ಯದ ವಸ್ತು, ಸಂಕೇತ ಅವು ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದು ಗಮನಾರ್ಹವಾದುದಾಗಿದೆ.

ಕಾವ್ಯದ ಬಹುಮುಖ್ಯ ಪ್ರತಿಮೆ ಶಿವನ ಲೀಲಾ ಸನ್ನಿವೇಶಗಳು. ಆತನ ಸೂಕ್ಷ್ಮವಾದ ಅನೇಕ ಪವಾಡಗಳು. ಕಾವ್ಯದ ತುಂಬಾ ಹರಡಿಕೊಂಡಿವೆ. ತಾನೇ ಒಂದು ಭೂಲೋಕದಲ್ಲಿ ಕಾಯಕದ ಮಹತ್ವ, ಭಕ್ತಿಯ ಮಹತ್ವವನ್ನು ತಿಳಿಯಪಡಿಸಲು ಅನೇಕ ಮಾನವ ಶರೀರಗಳಲ್ಲಿ ಪವಾಡಗಳ ಅಂಶಗಳನ್ನು ತುಂಬಿಸಿದ. ಹಾಗಾಗಿ ಶರಣರು ಭೂಲೋಕ ಕಲ್ಯಾಣಕ್ಕಾಗಿ ಅನೇಕ ಸಂದಿಗ್ಧ ಸನ್ನಿವೇಶಗಳಿಂದ ಪಾರುಮಾಡಿ ಅವರ ಮನದಾಸೆಗಳನ್ನು ಪೂರೈಸಿ ಭಕ್ತಿಯಲ್ಲಿ ಅವರನ್ನು ನೆನೆಸಿ ಜೀವನ ಸಾರ್ಥಕತೆಗೊಳಿಸಿದ್ದಾರೆ. ಈ ಅಂಶಗಳನ್ನು ಕಾವ್ಯದ ಪ್ರತಿ ಹಂತದಲ್ಲಿ ಗಮನಿಸಬಹುದಾಗಿದೆ.

ದೈವಾಂಶ ಸಂಭೂತರಾದ ಶರಣರೆಲ್ಲರು ಅಂದರೆ ಬೀರಪ್ಪ, ಮಾಳಿಂಗರಾಯ, ಅಕ್ಕವ್ವ, ಮಾಯವ್ವ, ಕಾಳಿನಾರಾಯಣ, ದ್ಯೈಗೊಂಡ, ಅಮೋಘಸಿದ್ಧ, ಪಾಂಡುರಂಗ, ರೇವಣಸಿದ್ಧ, ಲಿಂಗಮ್ಮ, ಗಂಗಿಮಾಳಮ್ಮ, ಸಿದ್ಧರಾಮ ಮುಂತಾದವರೆಲ್ಲ ಸಮುದಾಯದ ಸಂಸ್ಕೃತಿಯ ರಕ್ಷಣೆಗಾಗಿ ಅನೇಕ ಪ್ರತಿಮೆಗಳ ರೂಪಗಳಾದ ಪವಾಡ ದೃಶ್ಯಗಳನ್ನು ಹರಹುವುದರಲ್ಲಿ ಅನನ್ಯ. ಈ ಸನ್ನಿವೇಶಗಳು ಮಹಾಕಾವ್ಯದ ತುಂಬಾ ಗಮನಿಸಬಹುದು.

ಕಾವ್ಯವೇ ಒಂದು ಪ್ರತಿಮೆಯಿಂದ ರೂಪುಗೊಂಡಿದೆ. ಭಕ್ತಿಯ ಪ್ರತಿಮೆಯಿಂದ, ಸಮುದಾಯದ ಅನನ್ಯ ಪ್ರೀತಿಯಿಂದ ಕಾವ್ಯ ಸೃಷ್ಠಿಯಾಗಿದೆ.

ಮಹಾಕಾವ್ಯದಲ್ಲಿ ಸ್ವರ್ಗದ ಸನ್ನಿವೇಶಗಳು, ದೇವರುಗಳು, ದೇವರುಗಳ ಪವಾಡ ದೃಶ್ಯಗಳು, ಭೂಲೋಕದಲ್ಲಿ ಜೀವಿಸಂಕುಲಗಳು ಸೃಷ್ಠಿಯ ಹರಿಕಾರರ ಕಾಯಕ ಪ್ರವೃತ್ತಿಗಳು ದೇವತೆಗಳ ಉಗಮ ಭೂಲೋಕವನ್ನು ಕೈಲಾಸವಾಗಿ ನೋಡುವುದು, ಇದೆಲ್ಲಾ ಕಾವ್ಯದ ಪ್ರಾರಂಭದ ಹಂತದ ಪ್ರತಿಮೆಯಾಗಿ, ರೂಪಕವಾಗಿ, ಕಾವ್ಯದ ವಸ್ತು ಅಲ್ಲಿಂದ ರೂಪಗೊಳ್ಳುತ್ತದೆ. ಸಂಕೇತಗಳ ದೃಷ್ಟಿಯಲ್ಲಿ.

ನಂತರ ಕಾವ್ಯದಲ್ಲಿ ದೈವಾಂಶ ಸಂಭೂತನಾಗಿ ಹುಟ್ಟುವ ಬೀರಪ್ಪನ ಪೂರ್ವಜರ ಕಥೆ ಕಾವ್ಯ ವಿಸ್ತಾರವಾಗಿ ವಿವರ ನೀಡುತ್ತದೆ. ಆದ್ದರಿಂದ ಅಲ್ಲಿನ ಪೂರ್ವಜರ ಪವಾಡದೃಶ್ಯಗಳನ್ನು ನೋಡಬಹುದು. ನಂತರ ಬೀರಪ್ಪನ ಜನನಕ್ಕೆ ಅಡ್ಡಿ ಆತಂಕಗಳು ನಂತರ ಎಲ್ಲಾ ಸುಖಾಂತವಾಗಿ ದೇವಾಂಶನಾದ ಬೀರಪ್ಪನು ಜನಿಸಿ, ಅವನು ಲೀಲಾ ಸನ್ನಿವೇಶಗಳನ್ನು ಕಾವ್ಯ ಸುಂದರವಾಗಿ ಕಟ್ಟಿಕೊಡುತ್ತದೆ. ನಂತರ ಅವನು ತನ್ನಕ್ಕ ಮಾಯವ್ವಳೊಂದಿಗೆ ಅವನು ನಡೆಸುವ ಪವಾಡಗಳು ಅಸಾಮಾನ್ಯವಾದವು. ಬುದ್ಧಿಗೂ ನಿಲುಕದಂತವು. ಹಾಗಾಗಿ ಕಾವ್ಯದ ಪ್ರತಿಮೆಯಲ್ಲಿ ಇದು ಗಮನಾರ್ಹವಾದುದು.

ಬೀರಣ್ಣನ ಶಿಷ್ಯನಾದ ಮಾಳಿಂಗರಾಯನು ದೈವಾಂಶವುಳ್ಳವನಾಗಿ ಪವಾಡ ಪುರುಷನಾಗಿ ಧರೆಯಲ್ಲಿ ಮೆರೆಯುತ್ತಾನೆ. ಬೀರಪ್ಪನನ್ನು ಪೂಜಿಸುತ್ತ ಆತನ ವೈಭವವನ್ನು ಸಕಾರಗೊಳಿಸುತ್ತ, ತಾನು ಪವಾಡ ಪುರುಷನಾಗಿ ಶಿವನನ್ನು ಕಾಣುವ ಹಂಬಲದಲ್ಲಿ ಆತ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುವನು.

ಇದರಂತೆ ಇನ್ನು ಅನೇಕ ಶರಣರು ತಮ್ಮ ಪವಾಡ ಸದೃಶ್ಯಗಳಿಂದ ಲೋಕಕಲ್ಯಾಣ ಮಾಡಿರುವುದು ಕಾವ್ಯದ ತುಂಬೆಲ್ಲಾ ಹರಡಿಕೊಂಡಿದೆ. ಏಕೆಂದರೆ ಅವರೆಲ್ಲಾ ಸಿದ್ಧಪುರುಷರು. ಸ್ತ್ರೀಯರು ದೇವಾಂಶವುಳ್ಳವರು. ಸರ್ವಸಂಗ ಪರಿತ್ಯಾಗಿಗಳು, ಸತ್ಯ, ಧರ್ಮಗಳನ್ನು ನೆಲೆಗೊಳಿಸಿದಂತವರು. ಸಂಕಷ್ಟದಲ್ಲಿರುವ ಜನರನ್ನು ಸುಖದೆಡೆಗೆ ತಂದವರು. ಭಕ್ತಿಯ ಬೀಜ ಅವರ ಹೃದಯಗಳಲ್ಲಿ ಬಿತ್ತಿ ಭಕ್ತಿಯಲ್ಲಿ ತೇಲಿಸಿದವರು. ಅವರಿಗೆ ಶ್ರದ್ಧೆ, ಕಾಯಕ, ಆದರ್ಶ, ಸತ್ಯ, ನೀತಿ, ಜೀವಿಸುವ ಕಲ್ಪನೆ, ಜೀವನದ ಮಹತ್ವ ತೋರಿಸಿಕೊಟ್ಟವರು. ಶರಣರು ಮಹಾತ್ಮರು ಇವರು ಕಾವ್ಯದ ಪ್ರತಿಮೆಗಳಾಗಿ ಗೋಚರಿಸುತ್ತಾರೆ. ಹೀಗೆ ಹಾಲುಮತ ಮಹಾಕಾವ್ಯದಲ್ಲಿ 'ವಸ್ತು' ಭಕ್ತಿಯಾಗಿದ್ದು', 'ಸಂಕೇತ ಜೀವನವಾಗಿದ್ದು', 'ಪ್ರತಿಮೆ ಜೀವಿಸುವ ಹಾದಿ'ಯಾಗಿರುವುದು ಗಮನಾರ್ಹ ಅಂಶವಾಗಿದೆ.

ಭಕ್ತಿಯಿಂದ ಸರ್ವ ಕೆಟ್ಟಂಶಗಳನ್ನೆಲ್ಲ ತೊರೆದು ಜೀವನ ಸಾಗಿಸುವ ಆದರ್ಶಕ್ಕೆ ದಾರಿತೋರುವ ದೀಪವಾಗಿರುವುದು ಹಾಲುಮತ ಕಾವ್ಯ. ಇದು ಸಮುದಾಯದ ಉಸಿರಾಗಿ, ಹಸಿರಾಗಿ, ಅದರ ಜೀವಾಳವಾಗಿರುವುದು ಅನನ್ಯವಾಗಿದೆ. ಕಾವ್ಯದ ತುಂಬಾ ಶಿವನಲೀಲೆಗಳ ಚೇತನವನ್ನು ನೋಡಬಹುದಾಗಿದೆ. ಇದು ಹಾಲುಮತ ಕಾವ್ಯದ ರೂಪ, ಸಂಕೇತ, ಪ್ರತಿಮೆಗಳ ಒಟ್ಟು ವಿಶ್ಲೇಷಣೆಯಾಗಿದೆ.

**ಅಡಿ ಟಿಪ್ಪಣಿಗಳು**

೧. ಜನಪದ ಹಾಲುಮತ ಮಹಾಕಾವ್ಯದ **ರೂಪಕ, ಸಂಕೇತ,** ಪ್ರತಿಮೆಗಳ ಬಗ್ಗೆ ಡಾ. ಮೊಗಳ್ಳಿ ಗಣೇಶ್ ಅವರ ಪ್ರವಚನದಿಂದ ಮತ್ತವರ ಜೊತೆಗಿನ ಸಂವಾದದಲ್ಲಿ ಕಂಡುಕೊಂಡಿರುವ ಅಂಶಗಳನ್ನು ಈ ಅಧ್ಯಾಯಕ್ಕೆ ಬಳಸಿಕೊಳ್ಳಲಾಗಿದೆ.

ಜನಪದ ಲೋಕದಲ್ಲಿ ನಾನಾ ಪ್ರಕಾರಗಳಿದ್ದರೂ, ಅವುಗಳಲ್ಲಿ ಜನಪದರ ಭಾವುಕತೆಗೆ ಸಂಬಂಧಿಸಿದವು ಜಾಸ್ತಿ, ಏಕೆಂದರೆ ಜನಪದ ಮೌಖಿಕ ಕಂಠಸ್ಥ ಸಾಮ್ರಾಜ್ಯದ ಅಧಿಪತಿ. ಆಯಾ ಪರಿಸರದಲ್ಲಿ ವಂಶಪಾರಂಪರಿಕವಾಗಿ ಸೃಷ್ಟಿಯಾಗಿ ಬಂದಂತ ಅನೇಕ ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳು, ವಿಚಾರಗಳು, ಸಂಸ್ಕೃತಿ, ಹಬ್ಬಹರಿದಿನಗಳು, ನಡೆನುಡಿಗಳು, ಪುರಾಣಗಳು, ಮನರಂಜನೆಗಳು, ಇವೆಲ್ಲಾ ಜನಪದ ಲೋಕದಲ್ಲಿ ಜನಪದರಿಂದ ಜೀವ ಪಡೆದುಕೊಂಡು ಬಂದಿರುವಂತಹವು.

ಇಂತಹ ಶ್ರೀಮಂತಿಕೆಯನ್ನು ಹುಟ್ಟುಹಾಕಿದವರು ಜನಪದರು. ಅವರು ಜೀವಿಸಿದ ಕಾಲಾವಧಿಯ ಸಂದರ್ಭದಲ್ಲಿ ಸಮಾಜದಲ್ಲಿನ ಪ್ರತಿಯೊಂದು ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಇಂದಿಗೂ ಬಂದಿದ್ದಾರೆ. ಅದಕ್ಕೆ ಸಾಕ್ಷಿ, ಅನೇಕ ಕಥೆಗಳು, ಪುರಾಣಗಳು, ಕಾವ್ಯಗಳು, ಹಾಡುಗಳು, ಸಂಪ್ರದಾಯ ಕಾಯಕಗಳು, ಸಂಸ್ಕೃತಿಯ ವೈಭವ ಇವೇ ಅದಕ್ಕೆ ನೇರ ಸಾಕ್ಷಿಯಾಗಿವೆ. ಪಾರಂಪರಿಕವಾಗಿ ಬಂದ ನಂಬಿಕೆಗಳನ್ನು ತಮ್ಮ ಸ್ಮೃತಿಯಲ್ಲಿ ದಾಖಲಿಸಿಕೊಂಡು ತಮ್ಮ ಜೀವನವಿಧಾನದಲ್ಲಿ ಅಳವಡಿಸಿಕೊಂಡಿರುವುದನ್ನು ಜನಪದರಲ್ಲಿ ಕಾಣಬಹುದಾಗಿದೆ.

ಶತಶತಮಾನಗಳ ಹಿಂದೆ ನಡೆದಂತ ಯಾವುದೋ ತ್ಯಾಗ ಬಲಿದಾನ, ಸಂಸ್ಕೃತಿಯ ಸೃಷ್ಟಿ, ಭಕ್ತಿಯ ಉಗಮ, ದೈವಾಂಶ ರಕ್ಷಣೆ ಮುಂತಾದವುಗಳನ್ನು ಜನಪದರು ತಮ್ಮ ಶೈಲಿಯಲ್ಲಿ ಹಾಡಿ, ಅದರಂತೆ ನಂಬಿಕೆಯಿಂದ ಪಾಲಿಸುತ್ತಾ ಬಂದಿರುವುದು ನಿಜದ ಸಾಕ್ಷಿ. ಅದಕ್ಕೆ ಸಾವಿರಾರು ಹೆಸರಿಸಬಹುದು. ಅವುಗಳಲ್ಲಿ ಪ್ರಮುಖವಾದುದು ಕಾವ್ಯ. ಕಾವ್ಯ ಕೇವಲ ಹಾಡುವುದಲ್ಲ, ಹೇಳುವುದಲ್ಲ, ಅದು ಜನರ ಸಂಸ್ಕೃತಿಯ ಜೀವನಾಡಿ. ಜನರ ನಂಬಿಕೆಯನ್ನು ಹಚ್ಚಹಸಿರಾಗಿ ಹಸನು ಮಾಡುವಂತದ್ದು. ಅಂತಹ ಕಾವ್ಯಗಳು ನಾನಾ ಪ್ರಕಾರಗಳಲ್ಲಿ ಅನನ್ಯವಾಗಿ ಲಭ್ಯವಾಗುತ್ತವೆ. ಅವುಗಳಲ್ಲಿ 'ಹಾಲುಮತ ಮಹಾಕಾವ್ಯ' ಕೂಡ ಒಂದಾಗಿದೆ.

ಈ ಹಾಲುಮತ ಮಹಾಕಾವ್ಯ ಹಾಲುಮತ ಸಮುದಾಯದ ಸಮಸ್ತ ಚಿತ್ರಣವನ್ನು ಬಿಂಬಿಸುವಲ್ಲಿ ಯಶಸ್ವಿಯಾಗಿದೆ. ಅದರ ಮೂಲದಿಂದ ಅಂತ್ಯದ ಲೋಕ ಕಲ್ಯಾಣದವರೆಗೂ ಪ್ರತಿಯೊಂದು ಘಟನೆಯನ್ನು ನಿರೂಪಿಸಿದೆ ಕಾವ್ಯ.

ಕಾವ್ಯದಲ್ಲಿ ಪ್ರಮುಖವಾಗಿ ಕಂಡುಬರುವಂತದ್ದು ಶಿವನಲೀಲೆಗಳು ಮತ್ತು ಆತನ ಸೃಷ್ಟಿಯ ಪವಾಡಗಳು. ಹಾಲುಮತ ಸಮುದಾಯದಲ್ಲಿ ಕಂಡುಬರುವ ಪ್ರತಿಯೊಂದು ಘಟನೆಗಳು ಕಾಯಕದ ಮಹತ್ತರ ವಿಷಯಗಳು ಶಿವನ ಪವಾಡಗಳಿಂದ ರೂಪಗೊಂಡಿರುವಂತಿದ್ದು ಕಾವ್ಯದಲ್ಲಿ ಪ್ರಥಮವಾಗಿ 'ಮಾಂತ್ರಿಕ ಪವಾಡ'ವನ್ನು ಕಾಣುವುದು, ಶಾಂತಮುತ್ಯನು ಸ್ವರ್ಗದಲ್ಲಿ ರಾಕ್ಷಸರನ್ನು ಕೊಂದು ಅವುಗಳನ್ನು ಕುರಿಗಳನ್ನಾಗಿ ಮತ್ತು ಟಗರುಗಳನ್ನಾಗಿ ಮಾಡುವುದು ಕಾವ್ಯದಲ್ಲಿ ಕಂಡುಬರುವ ಮಾಂತ್ರಿಕ ಪವಾಡವಾಗಿದೆ. ಅಲ್ಲದೆ ನಂತರ ಪಾರ್ವತಿದೇವಿ ಅವುಗಳನ್ನು ರಕ್ಷಣೆಮಾಡಲು ಭೂಲೋಕದಲ್ಲಿ ತನ್ನ ಎದೆಹಾಲು ಮತ್ತು ಮಣ್ಣಿನಿಂದ ಗೊಂಬೆ ತಯಾರಿಸುವುದು ಅವುಗಳಿಗೆ ಶಿವನಿಂದ ಜೀವಕೊಡಿಸುವುದು ಇದು ಮತ್ತೊಂದು ಮಾಂತ್ರಿಕ ಪವಾಡವಾಗಿದೆ. ಹೀಗೆ ಹಾಲುಮತ ಮಹಾಕಾವ್ಯದಲ್ಲಿ ಮಾಂತ್ರಿಕ ಪವಾಡವು ಪ್ರಾರಂಭವಾಗಿ ಎಳೆಎಳೆಯಾಗಿ ಬಿಚ್ಚಿಕೊಳ್ಳುತ್ತಾ ಸಾಗುತ್ತದೆ. ಕಾವ್ಯದ

ತುಂಬೆಲ್ಲಾ ಮಾಂತ್ರಿಕ ಪವಾಡಗಳು ತುಂಬಿಕೊಂಡಿವೆ. ಏಕೆಂದರೆ ದೈವಾಂಶದ ಪವಾಡಪುರುಷರು ಶರಣರು ಕಾವ್ಯದಲ್ಲಿ ಸೃಷ್ಟಿಯಾಗಿದ್ದಾರೆ.

ಯಾವುದೇ ಜನಪದ ಕಾವ್ಯಗಳಲ್ಲಿ ಮಾಂತ್ರಿಕ ಪವಾಡಗಳು ಕಂಡುಬರುವುದು ಸಾಮಾನ್ಯ ಸಂದರ್ಭವಾಗಿದೆ. ಮಲೆಯ ಮಾದೇಶ್ವರ, ಮಂಟೇಸ್ವಾಮಿ, ಕಾಳಿಂಗರಾಯನಕಾವ್ಯಗಳಲ್ಲಿ ಮಾಂತ್ರಿಕ ಪವಾಡಗಳು ತುಂಬಿವೆ. ಈ ಎಲ್ಲಾ ಮಾಂತ್ರಿಕ ಪವಾಡಗಳು ಲೋಕಕಲ್ಯಾಣಕ್ಕಾಗಿ ಮೌಢ್ಯತೆಯ ನಿವಾರಣೆಗಾಗಿ, ಸಮಾಜ ಆದರ್ಶತೆಗಾಗಿ ಸತ್ಯಸಂಧತೆ ಸಾರುವುದಕ್ಕಾಗಿ, ಕೆಟ್ಟ ಆಚರಣೆಗಳನ್ನು ತೊಡೆದು ಹಾಕುವುದಕ್ಕಾಗಿ ದೈವಾಂಶ ಸಂಭೂತರಾದ, ಅಪಾರ ಯೋಗ ಸಿದ್ಧಿ ಪಡೆದ, ಶರಣರು, ಪವಾಡ ಪುರುಷರು ಈ ಮಾಂತ್ರಿಕ ಪವಾಡಗಳನ್ನು ಮಾಡುತ್ತಿದ್ದರು. ಸಂದಿಗ್ಧ ಪರಿಸ್ಥಿತಿಯನ್ನು ಹೋಗಲಾಡಿಸಲು ದುಷ್ಟರನ್ನು ಸಂಹಾರಮಾಡಲು ಭಕ್ತರನ್ನು ಪರೀಕ್ಷೆ ಮಾಡಲು ಮಾಂತ್ರಿಕ ಪವಾಡಗಳನ್ನು ಮಾಡುತ್ತಿದ್ದರು.

ಹಾಲುಮತ ಕಾವ್ಯದಲ್ಲಿ ಅನೇಕ ಮಾಂತ್ರಿಕ ಪವಾಡಗಳನ್ನು ನೋಡಬಹುದು. ಶರಣರು ಊಟಮಾಡುವಾಗ ಅವರು ಊಟಮಾಡಿದ ಮನೆಯಲ್ಲಿ ಧನಧಾನ್ಯ ಇದ್ದಕ್ಕಿದ್ದಂತೆ ತುಂಬುವುದು, ಅವರಿಗೆ ಆರ್ಶಿವಾದವನ್ನು ಮಾಡುವುದು ಮುಂತಾದವು ಕಾವ್ಯದಲ್ಲಿ ಕಂಡುಬರುವ ಮಾಂತ್ರಿಕ ಅಂಶಗಳಾಗಿವೆ. ಹಾಲುಮತದವರೆಂದು ಹೆಸರು ಬರಲು ದೇವರು ಮಾಡಿದ ಮಾಂತ್ರಿಕ ಪವಾಡ ಅತ್ಯಂತ ವಿಸ್ಮಯವಾದುದು. ನಂತರ ಭೂಲೋಕದಲ್ಲಿ ಅವು ಮತ್ತೆ ಮತ್ತೆ ಮರುಕಳಿಸಿವೆ. ಕುರಿಗಳು ಹುಟ್ಟಿಬರುವುದು, ಹುತ್ತದಲ್ಲಿ ಸೇರಿಕೊಳ್ಳುವುದು, ಅವುಗಳನ್ನು ರಕ್ಷಣೆಮಾಡಲು ಬೆಂಕಿ ಶೋಧ ಮಾಡುವುದು ಎಲ್ಲಾ ಮಾಂತ್ರಿಕ ಪವಾಡವಾಗಿದೆ ಕಾವ್ಯದಲ್ಲಿ. ಏಕೆಂದರೆ ಸಮುದಾಯದ ಬೆಳವಣಿಗೆಯಲ್ಲಿ ಕವಿ ಕಾವ್ಯವವನ್ನು ಕಟ್ಟುವಾಗ ಈ ಅಂಶಗಳನ್ನು ಹೇಳುತ್ತಾ ಹೋಗುವುದು ದೇವರ ಅನುಗ್ರಹದಂತೆ ಎಲ್ಲಾ ನಡೆದಿರುವುದನ್ನು ತಿಳಿಸುತ್ತಾನೆ.

ಕಾವ್ಯದಲ್ಲಿ ಬೀರಪ್ಪನ ಪೂರ್ವಜರ ವೃತ್ತಾಂತದಲ್ಲಿ ಶಿವನು ಕಮಾಳಾದೇವಿಯ ಪಾತಿವ್ರತ್ಯವನ್ನು ಹಾಳುಮಾಡುವುದಾಗಿ ಊರಿದ ಕೂಡಲೆ ಗಿಡವಾಗಿ ಬೆಳೆಯುವ ಸಸ್ಯದ ಬೀಜಕೊಟ್ಟು ಅದರ ಜೊತೆಗೆ ಕಮಳಾದೇವಿಯ ಮದುವೆ ಮಾಡಲು ಹೇಳಿದ. ಇದು ಅವಳ ಪಾತಿವ್ರತ್ಯ ಕೆಡಸಲು ಮಾಡಿದ ಮಾಂತ್ರಿಕ ಪವಾಡ, ಕೂಸು ಮಾಯವಾಗುವುದು, ತಾವರೆ ಹೂವಿನಲ್ಲಿಡುವುದು, ಅದರ ರಕ್ಷಣೆ ಮಾಡುವುದು ಕಾವ್ಯದಲ್ಲಿ ಮೂಡಿ ಬಂದಿರುವ ಮಾಂತ್ರಿಕ ಅಂಶಗಳು.

ಕಾಳಿನಾರಾಯಣನು ಪವಾಡ ಪುರುಷನು ಶಿವನ ಮಹಾಭಕ್ತನು, ಶಿವನು ಕೇಳಿದ ಹೂ ಸೀತಾಳ ಬಯಸಿದಂತೆ ತಂದುಕೊಡುವನು. ಯಾಕೆಂದರೆ ಕಾಳಿನಾರಾಯಣನು ದಿವ್ಯಜ್ಞಾನ ಹೊಂದಿರುವಂತವನು. ಈತನು ಪವಾಡಾಂಶಗಳನ್ನು ಮಾಡಿರುವುದು ಕಾವ್ಯದಲ್ಲಿ ಕಾಣಬಹುದಾಗಿದೆ. ಶಿವನ ಬೆವರಿನಿಂದ ಹುಟ್ಟಿದ ಬೀರಪ್ಪನ ಜೀವನ, ಬಾಲ್ಯಗಳು, ಅನಂತ ಮಾಂತ್ರಿಕ ಪವಾಡಗಳಿಂದ ಕೂಡಿವೆ. ವಿಷದ ಬುತ್ತಿಯ ಸನ್ನಿವೇಶ, ಎಮ್ಮೆಗಳ ಸಾವು ಇವುಗಳು ಮಾಂತ್ರಿಕತೆಯಿಂದ ಕೂಡಿವೆ. ಮಾಯವ್ವ ಬೀರಪ್ಪನ ಅಕ್ಕನಾಗಿ ನಿಂತು ಬೀರಪ್ಪನ ಬಾಲ್ಯದಲ್ಲಿ ಅನೇಕ ಮಾಯದಾಟಗಳು, ಬಿಲ್ಲುಬಾಣಗಳು, ಬೇಟೆಯಾಡುವುದು, ಎಲ್ಲವು ಮಾಂತ್ರಿಕ ಪವಾಡಾಂಶಗಳಿಂದ ತುಂಬಿಕೊಂಡಿವೆ. ಯಾಕೆಂದರೆ ಬೀರಪ್ಪ ದೈವಪುರುಷನು, ಪವಾಡಪುರುಷನು. ಕಾವಯದ ತುಂಬಾ ಅವನ ಲೀಲೆಗಳು ತುಂಬಿಕೊಂಡಿವೆ. ಹಾಲುಮತ ಕಾವ್ಯದ ಆರಂಭದಿಂದ, ಅಂತ್ಯದವರೆಗೂ ಮಾಂತ್ರಿಕ ಪವಾಡಗಳು ಪವಾಡ ಪುರುಷರಿಂದ ಸಮುದಾಯದ ಸಂಸ್ಕೃತಿಯ ಉಳಿವಿಗಾಗಿ ಸೃಷ್ಟಿಗೊಂಡಿವೆ. ಬೀರಪ್ಪನ ಮದುವೆಯ ಸಂದರ್ಭದಲ್ಲಿ ಅನೇಕ ಮಾಂತ್ರಿಕ ಪವಾಡಗಳು ನಡೆದು ಕೊನೆಗೆ ಸುಖಾಂತವಾಗುತ್ತದೆ. ನಂತರ ಬೀರಪ್ಪನು ಅನೇಕ ರೋಗರುಜಿನಗಳನ್ನು ತನ್ನ ಮಾಂತ್ರಿಕ ಶಕ್ತಿಯಿಂದ ವಾಸಿಮಾಡುವನು. ದುರಹಂಕಾರದಿಂದ ಮೆರೆಯುವವರನ್ನು ಅಹಂಕಾರ ಮುಕ್ತರನ್ನಾಗಿಮಾಡುವುದು, ರಾಕ್ಷಸರನ್ನು ಸಂಹಾರಮಾಡುವುದು ಎಲ್ಲಾ ಮಾಂತ್ರಿಕ ಪವಾಡಗಳಿಂದ

ಕಾವ್ಯದಲ್ಲಿ ಬೀರಪ್ಪನ ಲೀಲಾವಳಿಗಳನ್ನು ಕಾವ್ಯದಲ್ಲಿ ನೋಡಬಹುದಾಗಿದೆ. ಬೀರಪ್ಪ ದೇವರ ಶಿಷ್ಯನಾದ ಮಾಳಿಂಗರಾಯನು ಅನೇಕ ಪವಾಡಗಳನ್ನು ಮಾಂತ್ರಿಕಗಳನ್ನು ಮಾಡಿ ಪವಾಡ ಪುರುಷನಾಗಿದ್ದಾನೆ. ಅನೇಕ ನರಬಲಿಗಳನ್ನು, ಬೇಡರನ್ನು ಕೊಲ್ಲುವುದು, ಸೇಡು ತೀರಿಸಿಕೊಳ್ಳುವುದು ಎಲ್ಲಾ ಮಾಂತ್ರಿಕ ಪವಾಡಗಳಿಂದ ಕೂಡಿದೆ.

ಬೀರಪ್ಪದೇವರಿಗೆ ಹುಲಿಗಿಣ್ಣು ಮತ್ತು ಹುಲಿಮರಿ ಮಾಳಪ್ಪ ತಂದುಕೊಡುವುದು ಆತನು ಮಾಂತ್ರಿಕ ವ್ಯಕ್ತಿಯೆಂಬುದಕ್ಕೆ ನಿದರ್ಶವಾಗಿದೆ. ಅಲ್ಲದೆ ಕಾವ್ಯದಲ್ಲಿ ದೇವರುಗಳು ಬರುವುದು ಹೇಳಿಕೆಗಳನ್ನು ನೀಡವುದು, ಹರಕೆಗಳನ್ನು ಮುಟ್ಟಿಸುವಲ್ಲಿ ಮಾಂತ್ರಿಕಾಂಶಗಳನ್ನು ಕಾಣಬಹುದಾಗಿದೆ. ಹಾಲುಮತ ಕಾವ್ಯದಲ್ಲಿ ಶರಣ ವೃತ್ತಾಂತಗಳಲ್ಲಿ ಶರಣರ ಜೀವನದಲ್ಲಿ ಒಬ್ಬೊಬ್ಬ ಶರಣರ ಜೀವನದಲ್ಲಿ ಸಾವಿರಾರು ಮಾಂತ್ರಿಕ ಪವಾಡಗಳನ್ನು ಮಾಡಿದ್ದಾರೆ. ಅವು ಎಲ್ಲಾ ಶರಣರು ಮಾಡಿರುವುದು ಲೋಕಕಲ್ಯಾಣಕ್ಕಾಗಿ, ಜನರ ಕಲ್ಯಾಣಕ್ಕಾಗಿ ಎಂಬುದನ್ನು ಕಾವ್ಯ ಸುವಿಸ್ತಾರವಾಗಿ ಅಲ್ಲಲ್ಲಿ ತಿಳಿಯಪಡಿಸಿದೆ.

ಕಾವ್ಯದಲ್ಲಿ ಮಾಂತ್ರಿಕ ಪವಾಡಗಳೆ ಅಗ್ರಮಾನ್ಯವಾಗಿವೆ. ಯಾಕೆಂದರೆ ಪವಾಡಗಳಿಂದಲೆ ಪವಾಡ ಪುರುಷರಾಗಿದ್ದಾರೆ. ಅವರಿಗೆ ದೈವಾಂಶದ ಕುರುಹು ತುಂಬಿಕೊಂಡಿದೆ. ಆದ್ದರಿಂದಲೆ ಕಾವ್ಯದಲ್ಲಿ ಮಾಂತ್ರಿಕ ಪವಾಡಗಳು ತುಂಬಿಕೊಂಡಿವೆ. ಇಂದಿಗೂ ಇವೇ ಮಾಂತ್ರಿಕ ಪವಾಡಗಳು ಕಾವ್ಯದಲ್ಲಿ ಶರಣರನ್ನು ದೇವರುಗಳನ್ನಾಗಿ ಮಾಡಿವೆ. ಹಾಲುಮತ ಕಾವ್ಯದಲ್ಲಿ ಅಗ್ರಸ್ಥಾನ ತುಂಬಿಕೊಂಡಿರುವುದು ಮಾಂತ್ರಿಕ ಪವಾಡಗಳಿಗೆ ಶಿವನ ಲೀಲೆಯ ಚೇತನವಾಗಿರುವ ಕಾವ್ಯ, ಸಮುದಾಯದ ಬೆಳವಣಿಗೆ, ಸಂಸ್ಕೃತಿ, ಅದರ ಇತಿಹಾಸ ನಿರ್ಮಾಣ ಮಾಡಿರುವಲ್ಲಿ ಕಾವ್ಯ ಗಮನಾರ್ಹವಾಗಿದೆ.

ಇದ್ದಕ್ಕಿದ್ದಂತೆ ರೋಗವಾಸಿಮಾಡುವುದು, ಸತ್ತವರನ್ನು ಬದುಕಿಸುವುದು, ಆಶ್ಚರ್ಯಕರವಾಗಿ ಸಂಪತ್ತು ನೀಡುವುದು, ನಿಸರ್ಗದಲ್ಲಿ ಮಳೆ ತರಿಸಿ ಹಚ್ಚಹಸಿರಾಗಿಸುವಂತೆ ಮಾಡುವುದು, ಭಕ್ತರಿಗೆ ಪರೀಕ್ಷೆಮಾಡುವುದು, ಮಕ್ಕಳನ್ನು ಕೊಡುವುದು, ಸಮಾಜದಲ್ಲಿ ಶಾಂತಿ, ನೆಮ್ಮದಿ, ಕಾಪಾಡುವಂತೆ ಮಾಡುವುದು, ರಾಕ್ಷಸರನ್ನು ಸಂಹಾರಮಾಡುವುದು, ಅಸಾಮಾನ್ಯ ಕಾರ್ಯಗಳನ್ನು ಮಾಡಿತೋರಿಸುವುದು ಕಾವ್ಯದಲ್ಲಿ ಶರಣರು, ಪವಾಡಪುರುಷರು ಮಾಡಿದ್ದಾರೆ. ಇವರಿಗೆ ದೇವರ ಆಶೀರ್ವಾದೊಂದಿಗೆ ಹಲವು ಸಿದ್ಧಿಗಳನ್ನು, ದೂರದೃಷ್ಠಿಯನ್ನು ಕೊಡಮಾಡಿದ್ದಾನೆ. ಆದುದರಿಂದ ಕಾವ್ಯದಲ್ಲಿ ಪವಾಡ ಮಾಂತ್ರಿಕ ಸನ್ನಿವೇಶಗಳು ಹೇರಳವಾಗಿವೆ.

ಹಾಲುಮತ ಮಹಾಕಾವ್ಯದಲ್ಲಿ ಅಸಾಮಾನ್ಯ ಸನ್ನಿವೇಶಗಳನ್ನು ಕಾಣಬಹುದಾಗಿದೆ. ಸಮುದಾಯದ ಸೃಷ್ಠಿಯಲ್ಲಿ, ಅದರ ಸಂಸ್ಕೃತಿಯಲ್ಲಿ ಮಾಂತ್ರಿಕ ಪವಾಡಗಳು ಕಾರ್ಯನಿರ್ವಹಿಸಿವೆ. ಮೂಕಪ್ರಾಣಿಗಳು ಮಾತನಾಡುವುದು, ಅಡವಿಯ ಕ್ರೂರ ಜೀವಿಗಳು ಶರಣರ ಪ್ರೀತಿಗಳಿಸುವುದು ಹೀಗೆ ಒಟ್ಟಾರೆಯಾಗಿ ಕಾವ್ಯದಲ್ಲಿ ಸಂಪೂರ್ಣವಾಗಿ ಮಾಂತ್ರಿಕ ಪವಾಡಗಳೆ ತುಂಬಿಕೊಂಡಿವೆ. ನಂಬಿಕೆಯ ಪ್ರತಿರೂಪವೆ ಈ ಪವಾಡಗಳು. ಪವಾಡಗಳನ್ನು ಶರಣರು ಪವಾಡ ಪುರುಷರು ಮಾಡಿದಾಗ ಅವುಗಳನ್ನು ಬಲವಾಗಿ ನಂಬುವ ಭಕ್ತರು ಆಚರಣೆಗೊಳಿಸುತ್ತ ಸಮುದಾಯದ ಬೆಳವಣಿಗೆಯಲ್ಲಿ ಅಸಾಮಾನ್ಯ ಜೀವಕಳೆ ತಂದುಕೊಟ್ಟಿದೆ ಕಾವ್ಯದಲ್ಲಿ ಈ ಮಾಂತ್ರಿಕ ಪವಾಡಗಳು.

ಹೀಗೆ ಹಾಲುಮತ ಮಹಾಕಾವ್ಯದಲ್ಲಿ ಮಾಂತ್ರಿಕ ಪವಾಡಗಳು ಶರಣರ ಜೀವನ ವೃತ್ತಾಂತಗಳನ್ನು, ಅವರ ಜೀವನ ಸಾಧನೆಗಳನ್ನು, ಸಮುದಾಯದ ಸೃಷ್ಠಿಯನ್ನು, ಪರಿಪೂರ್ಣ ಬೆಳವಣಿಗೆಯನ್ನು, ಆಚರಣೆಗಳನ್ನು, ಸಮುದಾಯದಲ್ಲಿನ ಜನರ ಜೀವನವನ್ನು ಅವರ ಸಂಸ್ಕೃತಿಯನ್ನು ವೃದ್ಧಿಸುವಲ್ಲಿ ಮಾಂತ್ರಿಕ ಪವಾಡಗಳು ಅಸಾಮಾನ್ಯ ಪಾತ್ರವಹಿಸಿವೆ. ಹಾಲುಮತ ಮಹಾಕಾವ್ಯದಲ್ಲಿ ಧ್ಯಾನ, ನಂಬಿಕೆ, ಗೌರವ ಮುಂತಾದ ಸಮಷ್ಠಿ ಸೃಜನಶೀಲತೆಯ ಮೌಲ್ಯಗಳನ್ನು ಕಾಣಬಹುದು.

ಭಂಡಾರ ಇದು ದೈವಾಂಶದ ಪ್ರತೀಕವಾಗಿದೆ. ಇದನ್ನು ಹಾಕಿದರೆ ವಿಸ್ಮಯವಾದ ಮಾಂತ್ರಿಕ ಪವಾಡವು ನಡೆಯುತ್ತದೆ. ನದಿ ದಾಟುವಾಗ, ಮಕ್ಕಳು ಹುಟ್ಟುವಾಗ, ಮರಗಿಡಬೆಳೆಸುವಾಗ, ಭಂಡಾರವನ್ನು ಹಾಕಿ ಮಾಂತ್ರಿಕ ಪವಾಡವನ್ನು ಮಾಡಿರುವುದು ಕಾವ್ಯದಲ್ಲಿ ತುಂಬಾ ವಿಸ್ತಾರವಾಗಿ ಒಡಮೂಡಿವೆ. ಈ ಎಲ್ಲಾ ಅಂಶಗಳು ದೈವಾಂಶದಿಂದ ಕೂಡಿವೆ. ಹೀಗೆ ಶರಣರು, ಪವಾಡ ಪುರುಷರು ಲೋಕಕಲ್ಯಾಣಕ್ಕಾಗಿ, ಸಮುದಾಯದ ರಕ್ಷಣೆಯಲ್ಲಿ ಅನೇಕ ಪವಾಡಗಳನ್ನು ನಡೆಸಿರುತ್ತಾರೆ. ಇವು ಕಾವ್ಯದಲ್ಲಿ ಒಡಮೂಡಿವೆ.

**ಅಡಿ ಟಿಪ್ಪಣಿಗಳು**

೧. ಡಾ. ವೀರಣ್ಣ ದಂಡೆ, (ಸಂ.), **ಜನಪದ ಹಾಲುಮತ ಮಹಾಕಾವ್ಯ** ಅಧ್ಯಾಯ ಎರಡರಲ್ಲಿ ಕಾವ್ಯದ ಕಥನದಲ್ಲಿ ಬರುವ ಮಾಂತ್ರಿಕ ಪವಾಡಗಳನ್ನು ವಿಶ್ಲೇಷಿಸಲಾಗಿದೆ.

## ಪ್ರದರ್ಶನ

ಹಾಲುಮತ ಕಾವ್ಯದಲ್ಲಿ ಸಾಮಾಜಿಕ ಸನ್ನಿವೇಶಗಳ ಹಿನ್ನೆಲೆಯ ಜಾನಪದೀಯ ಘಟನೆಗಳನ್ನು ಅಭ್ಯಸಿಸುವ ವ್ಯಾಖ್ಯಾನಿಸುವ ಅಗತ್ಯವಿದೆ. ಹಾಗೆಯೇ ಈ ಕಾವ್ಯದ ಪ್ರದರ್ಶನಕಲೆ ಮತ್ತು ಪರಂಪೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಪ್ರದರ್ಶನದಲ್ಲಿ ಒಂದು ಸನ್ನಿವೇಶವನ್ನು ಅದೇ ಸಂದರ್ಭದಲ್ಲಿ ಮತ್ತೆ...ಮತ್ತೆ... ನೋಡಿ ಮರು ಪ್ರದರ್ಶನದಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ಗುರ್ತಿಸಿಕೊಳ್ಳಬಹುದು. ವ್ಯತ್ಯಾಸಗಳೇನಿದ್ದರೂ ನೀತಿ, ನಂಬಿಕೆ, ತಿಳಿಯಪಡಿಸುವ ವಿಷಯ ಮಾತ್ರ ಒಂದೇ ಆಗಿರುತ್ತದೆ.

ಪ್ರದರ್ಶನವು ಕಾವ್ಯದ ದೃಷ್ಟಿಕೋನದಿಂದ ವಿಶ್ಲೇಷಣೆ, ಜಾನಪದೀಯ ಅಂಶಗಳನ್ನು ನಿರ್ದಿಷ್ಟ ನಿರ್ವಹಣೆ ಸಂದರ್ಭದ ಸಂಗತಿಯಾಗಿ ಮಾತ್ರ ಪರಿಗಣಿಸದೆ ಅದು ನಿರ್ದಿಷ್ಟ ಸಂಸ್ಕೃತಿ ಹಾಗೂ ಸಮಾಜದಲ್ಲಿ ಕೂರಿಸುವುದು, ತಮ್ಮ ಜೀವನದಲ್ಲಿ ಮೈಗೂಡಿಸಿಕೊಂಡಿರುವ ಜಾನಪದೀಯ ಆಚರಣೆಗಳನ್ನು ಅವುಗಳ ಕಾರ್ಯಗಳನ್ನು ಅರ್ಥಮಾಡಿಕೊಳ್ಳುವ ಜವಾಬ್ದಾರಿ ತೋರಿಸುತ್ತದೆ.ಕಾವ್ಯದ ಸಾಂಸ್ಕೃತಿಕ ಸಾಮಾಜಿಕ ಉದ್ದೇಶಿತ ಪ್ರೇರಣೆಗಳು ಪ್ರದರ್ಶನಕಾರರಲ್ಲಿ ಹೊಂದಿರುವ ಅರ್ಥದ ಮೇಲೆ ಮಾತ್ರ ಪ್ರಭಾವ ಬೀರುತ್ತದೆ. ಅಲ್ಲದೆ ಪ್ರೇಕ್ಷಕರು ಹೊಂದಿರುವ ಅರ್ಥದ ಮೇಲೂ ಪ್ರದರ್ಶನ ಪ್ರಭಾವ ಬೀರುತ್ತದೆ.

ಕಾವ್ಯದ ಪ್ರದರ್ಶನದ ಮೇಲೆ ಅನೇಕ ಸಂದರ್ಭಗಳು ಪ್ರಭಾವ ಬೀರುತ್ತವೆ.[೧] ಅವು ಆಯಾ ಸಂದರ್ಭಕ್ಕನುಗುಣವಾಗಿ ಪ್ರಭಾವ ಬೀರುವವು. ಯಾವುದೇ ಘಟನೆಯ ಸಂಗತಿ ಕಾವ್ಯದಲ್ಲಿ ಇದ್ದರೂ, ಅದು ಪ್ರದರ್ಶನದಲ್ಲಿ ಬದಲಾಗುತ್ತದೆ. ಕಾವ್ಯದಲ್ಲಿ ಸ್ವರ್ಗದಲ್ಲಿ ನಡೆದ ಸಂಗತಿಯನ್ನು ಪ್ರದರ್ಶನದಲ್ಲಿ ಅಲ್ಲೆ ಒಂದು ಸ್ಥಳದಲ್ಲಿ ಸ್ವರ್ಗವೆಂದು ತೋರಿಸಿ ಕಾವ್ಯದ ಸಂಗತಿ ವಿವರಿಸಲಾಗುತ್ತದೆ. ಇದು ಭೌಗೋಳಿಕ ಸನ್ನಿವೇಶದ ಪ್ರದರ್ಶನವಾಗುತ್ತದೆ. ಪ್ರದರ್ಶನಕಾರರು ಕಾವ್ಯದ ಸನ್ನಿವೇಶವನ್ನು ತಮ್ಮ ದೈವ ಭಕ್ತಿಯೆಂದು ತನ್ಮಯತೆಯಿಂದ ಪ್ರದರ್ಶನ ಮಾಡುವರು.

ಪ್ರದರ್ಶನ ಮಾಡುವಾಗ ಜನರ ಸಂಪ್ರದಾಯ, ಸಂಸ್ಕೃತಿ, ಆಚಾರ, ವಿಚಾರ ಗಮನಿಸಬೇಕಾಗುತ್ತದೆ. ಏಕೆಂದರೆ ಕಾವ್ಯವು ಹಾಲುಮತಕ್ಕೆ ಸಂಬಂಧಿಸಿದ್ದರಿಂದ ಹಾಲುಮತಸ್ಥರ ಬಳಿ ಪ್ರದರ್ಶನ ಮಾಡಬೇಕಾಗುತ್ತದೆ. ಕಾವ್ಯವು ಒಂದು ಸಮುದಾಯಕ್ಕೆ ಸಂಬಂಧಪಟ್ಟಿದ್ದರೂ ಅದು ಇನ್ನಿತರ ಸಮುದಾಯಗಳೊಂದಿಗಿನ ಆಂತರಿಕ ಸಂಬಂಧಗಳನ್ನು ಸಂಸ್ಕೃತಿಯ ಒಟ್ಟು ಆಶಯಗಳನ್ನು ವ್ಯಕ್ತಪಡಿಸುತ್ತದೆ. ಹಾಗೆಯೇ ಭಿನ್ನ ಸಮುದಾಯಗಳೊಂದಿಗಿನ ಘರ್ಷಣೆಯ ಸ್ವರೂಪವನ್ನೂ ಈ ಕಾವ್ಯದಿಂದ ಅರಿಯಬಹುದಾಗಿದೆ.

ಪ್ರದರ್ಶನವು ಲೋಕಕಲ್ಯಾಣಕ್ಕಾಗಿ ರೂಢಿಗತವಾಗಿದ್ದು, ಜಾತ್ರೆ, ಉತ್ಸವ, ನಾಟಕ, ಪರಂಪರೆ ಉಳಿಸುವುದಕ್ಕಾಗಿ, ಕಾವ್ಯದ ಸಾರಸತ್ವತೆಯನ್ನು ತಿಳಿಸುವುದಕ್ಕಾಗಿ, ತಮ್ಮ ಸಂಸ್ಕೃತಿ ತೋರಿಸುವುದಕ್ಕಾಗಿ ಪ್ರದರ್ಶಿಸಲ್ಪಡುತ್ತದೆ. ಹಾಲುಮತ ಕಾವ್ಯದ ಪ್ರದರ್ಶನ, ಹಬ್ಬಗಳಲ್ಲಿ ಬೀರಪ್ಪನ ಜಾತ್ರೆಗಳಲ್ಲಿ, ಸುಗ್ಗಿಯ ಕಾಲದಲ್ಲಿ ಪ್ರದರ್ಶನವನ್ನು ಏರ್ಪಡಿಸಲಾಗುತ್ತದೆ. ಪ್ರದರ್ಶನದಲ್ಲಿ ಪ್ರೇಕ್ಷಕರು ಅಂದರೆ ಭಕ್ತರು ಮತ್ತು ಪ್ರದರ್ಶನಕಾರರು ಅಂದರೆ ಶಿವಶರಣರು ಇವರು ಸೇರಿದ್ದು ಹಾಲುಮತ ಕಾವ್ಯದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತಾರೆ.

ಹಾಲುಮತ ಕಾವ್ಯದ ಪ್ರದರ್ಶನ ಡೊಳ್ಳು, ಮೇಳಗಳು, ಬಸವಣ್ಣನ ಕೋಲುಗಳು ನಂದಿಕೋಲು, ತಾಳಗಳು, ಮುಂತಾದ ನಾದಗಳಿಂದ ಏರ್ಪಡುತ್ತದೆ. ಭಕ್ತರು ಕಾವ್ಯದ ಚರಣಗಳನ್ನ ಬಿಡಿಬಿಡಿಯಾಗಿ ಹೇಳುತ್ತ ಅದರ ಮಹಾತ್ಮೆ ಅರಿಯುತ್ತಾರೆ.ರಂಗದಲ್ಲಿ ನಡೆಯಬಹುದಾದ ರಂಗಕಲೆಯನ್ನು ಪ್ರದರ್ಶನವೆಂದು ಕರೆಯುವುದು ಸಾಮಾನ್ಯ. ಇಲ್ಲಿ ಕುಣಿತ, ಹಿಮ್ಮೇಳ, ಹಾಡು, ಮೌಖಿಕತೆ ಪ್ರಧಾನವಾಗಿದ್ದು, ಪ್ರದರ್ಶನದಲ್ಲಿ ಮೌಖಿಕ ಪರಂಪರೆ ಕ್ರಿಯಾರೂಪವನ್ನು ಪಡೆಯುವುದು ಇಲ್ಲಿನ ವಿಶೇಷವಾಗಿರುತ್ತದೆ. ಇದನ್ನು ಪ್ರದರ್ಶನದ ಸಂಗತಿ ಎನ್ನುವರು.

ಮಹಾಕಾವ್ಯದ ಗೊತ್ತಾದ ರೂಪವೊಂದರ ರಚನಾವಿನ್ಯಾಸವನ್ನು ಹೇಳುವಾಗ ಮತ್ತು ರಂಗಕಲೆಗಳ ಅಧ್ಯಯನದ ಸನ್ನಿವೇಶದಲ್ಲಿ ವ್ಯಾಪಕಾರ್ಥದಲ್ಲಿ ಬಳಸುವ ಪ್ರಯೋಗ ಪ್ರದರ್ಶನದಲ್ಲಿರುತ್ತದೆ. ಹಾಲುಮತ ಮಹಾಕಾವ್ಯವನ್ನು ಪ್ರದರ್ಶನ ಮಾಡುವ ವಿಧಾನ ಅತ್ಯಂತ ಭಕ್ತಿಯುತವಾಗಿರುವಂತದ್ದು. "ಹಾಡುಗಾರ ತನ್ಮಯತೆಯಿಂದ ಕಾವ್ಯವನ್ನು ಭಕ್ತಿಯಿಂದ ನಾಂದಿಯ ಹಾಡಿನಿಂದ ಪ್ರಾರಂಭಮಾಡಿದರೆ ಹಿಮ್ಮೇಳದವರು ಅದಕ್ಕೆ ಧ್ವನಿಗೂಡಿಸುತ್ತ ಕಾವ್ಯವನ್ನು ಹಾಡಲಾಗುತ್ತದೆ."

ಇಡೀ ಹಾಲುಮತ ಮಹಾಕಾವ್ಯವು ಒಬ್ಬನೆ ಮೌಖಿಕ ಕಂಠಸ್ಥನ ಹೃದಯದಿಂದ ಹರಿದು ಬಂದಿರುವಂತದ್ದು. ಅವನು ಅನಕ್ಷರಸ್ಥನಾದರೂ ಆಚರಣೆ, ನಂಬಿಕೆ, ಭಕ್ತಿ, ಬಯಕೆ, ಇವೆಲ್ಲಾ ಅವನಲ್ಲಿ ಮಹಾಕಾವ್ಯ ಹಾಡಲು ಪ್ರೇರಕ ಶಕ್ತಿಯಾಗಿರುತ್ತದೆ. ಉತ್ತರಕರ್ನಾಟಕದಲ್ಲಿ ಹಾಲುಮತ ಮಹಾಕಾವ್ಯದ ಪ್ರದರ್ಶನಗಳು ಹೆಚ್ಚಾಗಿ ನಡೆಯುವುದನ್ನು ಕಾಣಬಹುದಾಗಿದೆ.

ಹಾಲುಮತ ಮಹಾಕಾವ್ಯವು ಒಂದು ದೀರ್ಘವಾದ ಮಹಾಕಾವ್ಯವಾಗಿದ್ದು ಅದು ಬೀರಪ್ಪನ ಜೀವನ, ಅಲ್ಲದೆ ಹಾಲುಮತದ ಪರಂಪರೆ ಬೆಳೆದು ಬಂದ ರೀತಿ-ನೀತಿ, ಮಾಳಿಂಗರಾಯ ಇತರ ಶಿವಶರಣರ ಸಾಧನೆಗಳು, ಮಾಂತ್ರಿಕ ಪವಾಡಗಳು ಮುಂತಾದವು ಕಾವ್ಯದಲ್ಲಿ ಅಡಕವಾಗಿದ್ದು ಅದೊಂದು ದೀರ್ಘವಾದ ಮಹಾಕಾವ್ಯವಾಗಿದ್ದು ಶಿವನ ಲೀಲೆಗಳು ಕಾವ್ಯದ ತುಂಬಾ ಹರಡಿಕೊಂಡು ಮಹಾಕಾವ್ಯದಲ್ಲಿ ತುಂಬಿಕೊಂಡಿದೆ.

**ಪರಂಪರೆ**

ಶಿಷ್ಟ ಸಾಹಿತ್ಯಕ್ಕೆ ಇರುವ ಹಾಗೆ ಜನಪದ ಸಾಹಿತ್ಯಕ್ಕೂ ಅದರದೇ ಆದ ಒಂದು ಪರಂಪರೆಯಿದೆ. ಇತಿಹಾಸ ಮಾತ್ರ ಜನಪದ ಸಾಹಿತ್ಯಕ್ಕೆ ಅಷ್ಟಾಗಿ ಇಲ್ಲ. ಏಕೆಂದರೆ ಇದಕ್ಕೆ ಮುಖ್ಯಕಾರಣ ಲಿಖಿತ ಪರಂಪರೆ ಇಲ್ಲದಿರುವುದು. ಕೇವಲ ಮೌಖಿಕ ಸಾಹಿತ್ಯವಾದ ಜನಪದ ಕಾವ್ಯ ಸಾಹಿತ್ಯ ಹೆಚ್ಚಾಗಿ ಭಾಷೆಯ ದೃಷ್ಟಿಯಿಂದ ಒಂದು ಕಾವ್ಯ ಕಾಲಕಾಲಕ್ಕೆ ಆಯಾ ಕಾಲದ ಭಾಷಾ ರೂಢಿಗಳಿಗೆ ಅನುಗುಣವಾಗಿ ಬದಲಾಗುತ್ತ ಬಂದಿದೆ. ಕಾವ್ಯವು ಯಾವ ಅವಧಿಯಲ್ಲಿ ರಚಿತವಾಯಿತೆಂದು ತಿಳಿಯಲು ಸಾಧ್ಯವಿರದೆ ಇರುವುದರಿಂದ ಭಾಷೆಯ ದೃಷ್ಟಿಯಿಂದ ಪ್ರಾದೇಶಿಕ ಭಿನ್ನತೆಗಳನ್ನು ಕಾಣಬಹುದು, ಕಾಲಮಾನದ ಭಿನ್ನತೆಗಳನ್ನಲ್ಲ.

ಜನಪದ ಮಹಾಕಾವ್ಯವಾದ ಹಾಲುಮತ ಮಹಾಕಾವ್ಯಕ್ಕೆ ಜೀವಂತ ಪರಂಪರೆ ಲಭ್ಯವಿದೆ. ಅದು ಇಂದಿಗೂ ಕಾಣಬಹುದು. ಜನಪದ ಕಾವ್ಯವೆಲ್ಲ ಸೊಲ್ಲೆತ್ತಿ ರಾಗವಾಗಿ ಹಾಡುವ ಕಾವ್ಯವಾಗಿರುವುದರಿಂದ ಹಾಡಿ, ಹಾಡಿದ್ದನ್ನು ಕೇಳಿ ಪದ್ಯರೂಪಕಗಳ ಲಯಗಳನ್ನು ಸರಿಯಾಗಿ ಹಿಡಿದುಕೊಳ್ಳುವುದನ್ನು ಕಾವ್ಯ ಹಾಡುಗಾರನಿಗೆ ಪರಂಪರೆ ತಿಳಿಸಿಕೊಡುತ್ತದೆ.

ಮಹಾಕಾವ್ಯದ ಪರಂಪರೆ ಜೀವಂತವಾಗಿರುವುದು ಅನೇಕ ಸಂಸ್ಕೃತಿಗಳ ಒಡಲಾಳವಾಗಿರುವ ಸಮುದಾಯದಿಂದ, ಸಮುದಾಯದಲ್ಲಿ ಹಿರಿಯರು ತಮ್ಮ ಮನೆಯ ಕಿರಿಯರಿಗೆ ಕಾವ್ಯವನ್ನು ಕಲಿಸಿಕೊಡುವುದು, ಅವರು ಕಲಿತ ರಾಗವನ್ನು ಅವರಿಗೆ ತಿಳಿಸುವುದು, ಜಾತ್ರೆಗೆ, ಪ್ರದರ್ಶನಕ್ಕೆ ಹೋದಾಗಲೆಲ್ಲ ಅವರನ್ನು ಹಿಂದೆ ಕರೆದುಕೊಂಡು ಹೋಗುವುದು, ಮತ್ತು ಅಲ್ಲಿ ನಡೆಯುವ ಪ್ರದರ್ಶನಗಳಲ್ಲಿ ಹಿಮ್ಮೇಳದಲ್ಲಿ ಅವರನ್ನು

ಆಡಿಸಲಾಗುತ್ತದೆ. ನಂತರ ಸ್ವತಂತ್ರವಾಗಿ ಹಾಡಬಲ್ಲವರಾಗಿದ್ದಾರೆ. ಅವರು ಮುಂದೆ ತಮ್ಮ ಸಮುದಾಯದವರಿಗೆ ಹೇಳುತ್ತಾರೆ. ಹೀಗೆ ಅದು ಸಾಗುತ್ತದೆ ಪರಂಪರೆಯಾಗಿ.

ಜನಪದ ಮಹಾಕಾವ್ಯದಲ್ಲಿ ಮೌಖಿಕ ಸಂಪ್ರದಾಯವನ್ನು ಉಳಿಸುವಲ್ಲಿ ಪಂರಪರೆ ಅಗಾಧವಾದ ಶ್ರಮ ವಹಿಸಿದೆ. ಪರಂಪರೆ ಉಳಿದುಕೊಂಡು ಬಂದಿರುವುದು ಬಾಯಿಂದ ಬಾಯಿಗೆ ಕಾವ್ಯ ಹರಿದುಕೊಂಡು ಬಂದಿರುವುದರಿಂದ. ಹಾಗಾಗಿ ಹಾಲುಮತ ಮಹಾಕಾವ್ಯಕ್ಕೆ ಒಂದು ಮಹತ್ತರ ಪರಂಪರೆಯನ್ನು ನೋಡಬಹುದಾಗಿದೆ. ಇದು ಅತ್ಯಂತ ಶ್ರೀಮಂತಿಕೆಯಿಂದ ಕೂಡಿದ್ದು ಸಮುದಾಯವೊಂದರ ಸಂಸ್ಕೃತಿ, ಸಂಪ್ರದಾಯ ಬೆಳವಣಿಗೆ ಮುಂತಾದವನ್ನು ಬಿತ್ತರಿಸುತ್ತದೆ.

ಮಹಾಕಾವ್ಯವು ಅನೇಕ ಶಿವಶರಣರ ಜೀವನ ಸಾಧನೆಗಳನ್ನು, ಶಿವನಲೀಲೆಗಳನ್ನು ಚಿತ್ರಿಸಿರುವುದಲ್ಲದೆ, ಬೀರಪ್ಪನ ಜೀವನ ವೃತ್ತಾಂತವನ್ನು, ಮಾಳಿಂಗರಾಯನನ್ನು ಅವನ ಭಕ್ತಿ, ಶಿಷ್ಯತನವನ್ನು ಮಹಾಕಾವ್ಯವು ವಿವರ ನೀಡುತ್ತದೆ. ಇಂತಹ ಅನೇಕ ಸಂಸ್ಕೃತಿಗಳ ಪ್ರತಿರೂಪ ಮಹಾಕಾವ್ಯ ಹೊಂದಿದೆ. ಇವು ಮುಂದೆ ಹಾಗೆ ಬೆಳೆದುಕೊಂಡು ಬಂದಿರುವುದು ಗಮನಿಸಬಹುದು. ಏಕೆಂದರೆ ಹಾಡುಗಾರ ಹಿಮ್ಮೇಳದವರಿಗೆ ಇದರ ಕಾವ್ಯ ಚರಣಗಳನ್ನು ಹೇಳಿ ಅವರಿಗೆ ಅದರ ಪರಂಪರೆಯ ಮಹತ್ತರ ವಿಷಯ ತಿಳಿಸಲಾಗುತ್ತದೆ.

ಹಾಲುಮತ ಮಹಾಕಾವ್ಯವು ಪ್ರಾದೇಶಿಕ ಪರಂಪರೆ ಹೊಂದಿದೆ. ಆಯಾ ಪ್ರದೇಶಗಳಲ್ಲಿ ನಡೆದಿರುವ ಮಹತ್ವದ ಪವಾಡಗಳು, ಅಲ್ಲಿನ ಶರಣರ ಜೀವನ ಚರಿತ್ರೆಯ ಅಂಶಗಳು ಅಲ್ಲಿನ ಭಕ್ತ ಸಮೂಹದ ಸಂಸ್ಕೃತಿ, ಇವೆಲ್ಲಾ ಪ್ರಾದೇಶಿಕ ಪರಂಪರೆಯಾಗಿದೆ.

ಹಾಲುಮತ ಸಮುದಾಯದಲ್ಲಿನ ಪರಂಪರೆ ಅವರು ರೂಢಿಸಿಕೊಂಡುಬಂದಿರುವ ಜೀವನ ಆಚಾರ-ವಿಚಾರ, ಸಂಸ್ಕೃತಿ, ಭಕ್ತಿಯ-ವಿಧಾನಗಳು, ಆಚರಣೆಗಳು ಮುಂತಾದವು ಕಾವ್ಯದ ಪರಂಪರೆಯನ್ನು ತಿಳಿಯಪಡಿಸುತ್ತದೆ.

'ಹಾಲುಮತದ'ವರು ಮಾಡುವ ವೃತ್ತಿ, ಕುರಿಕಾಯುವುದು, ಹೈನುಗಾರಿಕೆ ಮುಂತಾದ ಕಾಯಕಗಳು ಹಾಲುಮತದ ಪರಂಪರೆಯನ್ನು ಸಾರುತ್ತದೆ. ಅದು ಮೌಖಿಕವಾಗಿ ಸಾಗುತ್ತ ಹೋಗುತ್ತದೆ. ಶತಮಾನಗಳಲ್ಲೂ ಅದು ತನ್ನ ಚಹರೆಯನ್ನು ಹಾಗೆ ಉಳಿಸಿಕೊಂಡು ಬರುತ್ತದೆ.

ಸಂಪ್ರದಾಯ ನಂಬಿಕೆಗಳು, ಅವರು ಮಾಡುವ ದಾನಧರ್ಮಗಳು, ಎಲ್ಲವೂ ಹಾಲುಮತ ಕಾವ್ಯದಲ್ಲಿ ಪಂರಂಪರಾನುಗತವಾಗಿ ಹರಿದುಕೊಂಡು ಬಂದಿವೆ. ಶರಣರ ಮಾತುಗಳಲ್ಲಿ ಭಕ್ತರಿಗೆ ಉಂಟುಮಾಡುವ ಪವಾಡಗಳು, ಅವರಲ್ಲಿ ಮೂಡಿಬರುವ ಬಲವಾದ ನಂಬಿಕೆಗಳು, ಅವರು ಆಚರಿಸಿಕೊಂಡು ಬಂದಿರುವ ಸಂಪ್ರದಾಯಗಳು 'ಹಾಲುಮತ' ಸಮುದಾಯದ ಪರಂಪರೆಯನ್ನು ಸಾರುತ್ತದೆ.

ಹಾಲುಮತ ಮಹಾಕಾವ್ಯದ ಪರಂಪರೆ ಅತ್ಯಂತ ಪ್ರಾಚೀನವಾದುದಾಗಿರಬೇಕು. ಏಕೆಂದರೆ ಅದು ಮೌಖಿಕ ಕಂಠಸ್ಥ ಸಂಪ್ರದಾಯದಿಂದ ಹರಿದುಕೊಂಡು ಬಂದಿದ್ದು ಅದು ಒಬ್ಬರ ಬಾಯಿಂದ ಮತ್ತೊಬ್ಬರ ಬಾಯಿಗೆ ಹರಿದುಕೊಂಡು ಬಂದು ಅಲ್ಲಿನ ಪ್ರದೇಶದ ಸತ್ಯ ಪವಾಡವನ್ನೆಲ್ಲಾ ಪರಂಪರೆಯಿಂದ ತಿಳಿಸಿಕೊಂಡು ಸಾಗುತ್ತದೆ.

ತಮ್ಮ ಕಾಯಕಕ್ಕೆ ತಕ್ಕಂತೆ ಹಾಲುಮತಸ್ಥರು ಎತ್ತರವಾದ ಪರ್ವತ ಪ್ರದೇಶಗಳಲ್ಲಿ, ಅರಣ್ಯ, ಹುಲ್ಲುಗಾವಲುಗಳಲ್ಲಿ ಸೂಕ್ತ ಜಾಗ ಆಶ್ರಯಿಸಿಕೊಂಡು ಜೀವನ ಪಾಲನೆ ಮಾಡುವರು. ಅವರು ದೇಶದ ಎಲ್ಲಾ ಕಡೆಗಳಲ್ಲೂ ಕಂಡುಬರುವರು. ಸಂಪ್ರದಾಯದಲ್ಲಿ ಇತರರನ್ನು ಹೋಲಿಕೆಯಾಗಿ ಕಂಡರೂ ಜೀವಿಸುವ ಪರಿಯಲ್ಲಿ ಭಿನ್ನತೆಯನ್ನು ಕಂಡುಕೊಳ್ಳುತ್ತಾರೆ. ಅವರ ಪರಂಪರೆಯೇ ಅದಕ್ಕೆ ಸಾಕ್ಷಿ. ಏಕೆಂದರೆ ಕಾಯಕಕ್ಕೆ ತಕ್ಕಂತೆ ಪರಂಪರೆ ಬೆಳೆಸಿಕೊಂಡು ಬಂದಿದ್ದಾರೆ. ಕಾಡು ಮೇಡುಗಳಲ್ಲಿ, ಮುಳ್ಳು ಕಂಟಿಗಳಲ್ಲಿ ಅಲೆದಾಡುವವರಾಗಿದ್ದರಿಂದ ಒರಟು ಬಟ್ಟೆ ಇವರ ಮೈಗೆ, ಚಳಿ ಗಾಳಿ ಮಳೆಯಿಂದ ರಕ್ಷಣೆಗಾಗಿ ಸದಾ ಹೆಗಲನ್ನಾಶ್ರಯಿಸಿದ ದಪ್ಪ ಕಂಬಳಿ, ಕಾಲಿಗೆ

ದಪ್ಪನೆಯ ಚಪ್ಪಲಿ, ಊಟಕ್ಕೆ ಅಂಬಲಿ ನುಚ್ಚು, ಕುರಿ ಆಡಿನ ಹಾಲು ಉದರಕ್ಕೆ. ಹೀಗಾಗಿ ಆಡಂಬರದ ಜೀವನ ಇವರ ಪಾಲಿಗೆ ದೂರ. ತಮ್ಮದೇ ಕುರಿ ಮಂದೆ ಪೋಷಣೆಗೆ ನಾಡು ತೊರೆದು ಕಾಡುವಾಸಿಗಳಾದ ಇವರಿಗೆ ಶಿಕ್ಷಣ ವಾಂಛಿತವಾದುದು. ಹಾಗಾಗಿ ಇವರು ಅಷ್ಟೇನೂ ನಾಗರಿಕರಲ್ಲ. ಹುಂಬ ಜನಾಂಗವೆಂಬ ಅಭಿಮಾನ, ಅನುಕೂಲಸ್ಥರಿಂದ ಸಹಾಯ, ಅಲ್ಲದೆ ಇವರ ಗುಣ, ಸ್ವಭಾವ ಮುಗ್ಧತನ ಯಾವ ನಾಗರಿಕನಿಗೂ ಕಡಿಮೆಯಲ್ಲದ್ದು. ಅಂತಹ ಪರಂಪರೆ ಬೆಳೆಸಿಕೊಂಡು ಬಂದಿದ್ದಾರೆ ಹಾಲುಮತಸ್ಥರು.

ಸಾಧು ಜನ, ಸಂಪನ್ನ ಜನ, ಮೂಢಮತಿಯರಾಗದೆ ಶಿವನೇ ಗತಿಯೆಂದು ಬಾಳಿನಲ್ಲಿ ಅಡಿಯಿಡುವ ಈ ಕಾಡುವಾಸಿಗಳಿಗೆ 'ಕುರುಬ ಗೌಡ' ಎಂಬ ಒಳ್ಳೆಯ ಹೆಸರು. ಕುರುಬ ಕಂಬಳಿ ಮಂಗಳ ಕಾರ್ಯಗಳಿಗೆ ಪವಿತ್ರವಾದುದಾಗಿದೆ. ಬೆಟ್ಟದಲ್ಲಿ ನಿಂತು ಕಂಬಳಿ ಬೀಸಿದರೆ ಮಳೆ ಬಂದು ಬರ ಅಳಿಸುವುದೆಂಬ ದೃಢ ನಂಬಿಕೆ. ಅಲ್ಲದೆ ಇವರು ಇನ್ನೂ ಅನೇಕ ಕೃಷಿ, ಕೃಷಿಯೇತರ ಕಾಯಕಗಳನ್ನು ಪರಂಪರಾನುಗತವಾಗಿ ಮಾಡಿಕೊಂಡು ಬಂದಿದ್ದಾರೆ.

ಹೀಗೆ ಕಾವ್ಯದ ಪರಂಪರೆಯಲ್ಲಿ ದೈವಾಂಶ ಸಂಭೂತನಾದ ಬೀರಪ್ಪ ಅವನ ಶಿಷ್ಯನ ಪವಾಡಗಳು, ಶರಣರ ಜೀವನ ಸಿದ್ಧಾಂತಗಳು, ಸಮುದಾಯದಲ್ಲಿ ನಂಬಿಕೆ, ಸಂಸ್ಕೃತಿ, ಆಚಾರ, ಸಂಪ್ರದಾಯದ, ಶ್ರೀಮಂತಿಕೆ ಸಾರುವುದು ಮುಂತಾದ ಎಲ್ಲಾ ಅಂಶಗಳು ಹಾಲುಮತ ಕಾವ್ಯದ ಪರಂಪರೆಯಲ್ಲಿ ಬೆಳೆದುಕೊಂಡು ಬಂದಿವೆ.

ಸ್ತ್ರೀಯರ ಸ್ಥಾನಮಾನ, ಕಾಯಕ ಪ್ರವೃತ್ತಿಗಳು, ಸಂಬಂಧಗಳು, ಸೃಜನಾತ್ಮಕ ಚಟುವಟಿಕೆಗಳು, ಜಾತ್ರೆ, ಹಬ್ಬ, ಹೈನುಗಾರಿಕೆ, ಭಕ್ತಿಯ ಪರವಶತೆ ಮುಂತಾದ ಸಮುದಾಯದ ಚಿತ್ರಗಳು ಹಾಲುಮತ ಕಾವ್ಯದ ಪಂರಪರೆಯಲ್ಲಿ ಬೆಳೆದುಕೊಂಡು ಬಂದು ಜನಪದರಿಗೆ ಮಾರ್ಗದರ್ಶಿಯಾಗಿದೆ.

ಜನಪದರ ಜೀವನದಲ್ಲಿ, ಸಮುದಾಯದ ಗುಂಪಿನಲ್ಲಿ, ಹಾಲುಮತ ಮಹಾಕಾವ್ಯದ ಪರಂಪರೆಯ ಎಲ್ಲಾ ಗುಣಲಕ್ಷಣಗಳ ಅಂಶಗಳು ಮನೆಮಾಡಿ ಅವರ ಜೀವನವನ್ನು ಪಾವನವನ್ನಾಗಿ ಮಾಡಿದೆ. ಶಿವನ ಲೀಲೆಗಳನ್ನು ಕೊಂಡಾಡುತ್ತಾ ಇಂದಿಗೂ ಕಾಯಕವೇ ಜೀವನದ ಮುಕ್ತಿಯೆಂದು ಅರಿತು ಜೀವಿಸುತ್ತ ಕಾವ್ಯವನ್ನು ಹಾಡುತ್ತ ಅದರ ಪರಂಪರೆಯನ್ನು, ಗತವೈಭವನ್ನು ಸಾರುತ್ತ ಜನಪದರು ಬಾಳುತ್ತಿದ್ದಾರೆ.

**ಅಡಿ ಟಿಪ್ಪಣಿಗಳು**

೧. ಡಾ. ವೀರಣ್ಣ ದಂಡೆ (ಸಂ.), **ಜಾನಪದ ಹಾಲುಮತ ಮಹಾಕಾವ್ಯ**, ಪು. ೮

೨. ಬೋ. ನ. ಬಸವರಾಜ್, **ಹಾಲುಮತದ ಹುಟ್ಟು**, ಪು. ೨೦

ಹಾಲುಮತ ಮಹಾಕಾವ್ಯವು ಜನಪದ ಮಹಾಕಾವ್ಯಗಳಲ್ಲಿ ಅಗ್ರಮಾನ್ಯವಾದುದು. ಇದು ಮೌಖಿಕ ಸಂಪ್ರದಾಯದೊಂದಿಗೆ ಹರಿದುಕೊಂಡು ಬಂದಂತ, ಪವಾಡ ಪುರುಷರ ಜೀವನ, ಸಾಧನೆ, ತ್ಯಾಗ, ಬಲಿದಾನ, ಸಮುದಾಯ ರಚನೆಯಲ್ಲಿ ಅವರ ಪವಾಡಗಳು, ಸಾಧಕಗಳು, ಕಾಯಕ ವೃತ್ತಿಗಳು , ಸಮಾಜ ಸಂಸ್ಕೃತಿ ಬಿಂಬಿಸುವ ಆಧ್ಯಾತ್ಮವಾದ ಒಂದು ಮಹಾಕಾವ್ಯ ಈ ಹಾಲುಮತ ಮಹಾಕಾವ್ಯ.

ಉತ್ತರ ಕರ್ನಾಟಕದಲ್ಲಿ ಚಾಲ್ತಿಯಲ್ಲಿರುವ ಈ ಹಾಲುಮತ ಮಹಾಕಾವ್ಯವು ಅಲ್ಲಿ ತುಂಬಾ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಅಲ್ಲದೆ ಕಾವ್ಯದ ತತ್ವಗಳಿಗೆ, ಸಂಸ್ಕೃತಿಗೆ ಅಲ್ಲಿನ ಜನರು, ಸಂಪೂರ್ಣವಾಗಿ ಭಾಗಿಗಳಾಗಿದ್ದಾರೆ. ಅವರು ಕಾವ್ಯದಲ್ಲಿ ಬರುವ ದೇವರನ್ನು ಮನೆದೇವರೆಂದು ಪೂಜ್ಯನೀಯ ಭಾವನೆಯಿಂದ ಪ್ರತಿವರ್ಷ ಜಾತ್ರೆ, ಹರಕೆ, ಮುಂತಾದವು ಮಾಡುತ್ತಾರೆ. ಅಲ್ಲದೆ ಕಾವ್ಯವನ್ನು ಹಾಡುಗಾರನಾದ ಸಿದ್ದಪ್ಪ ಮೇಟಿ ಎಂಬತ್ತರ ವಯಸ್ಸಾದವರು. ಸುಲಲಿತವಾಗಿ ಹಾಡುತ್ತಾನೆ. ಒಬ್ಬನೆ ಕಾವ್ಯವನ್ನು ಕಟ್ಟಿ ಹಾಡುವನೆಂದರೆ ಕಾವ್ಯದ ಸತ್ವ, ಭಕ್ತಿ, ಬಯಕೆ, ಗೌರವ ಆ ಹಾಡುಗಳಲ್ಲಿ ಎಷ್ಟರ ಮಟ್ಟಿಗೆ ತುಂಬಿಕೊಂಡಿದೆಯೆಂದರೆ ಮಹತ್ತರವಾದುದು ಆತನ ಜೊತೆಗೆ ಹಿಮ್ಮೇಳನದವರು ಧ್ವನಿ ಗೂಡಿಸಿ ಕಾವ್ಯಕ್ಕೆ ಶೋಭೆಯನ್ನು ತರುತ್ತಾರೆ.

ಹಾಲುಮತ ಮಹಾಕಾವ್ಯವು ಮೌಖಿಕವಾಗಿ ಬಾಯಿಂದ ಬಾಯಿಗೆ ಹರಿದುಕೊಂಡು ಬಂದಂತದ್ದು. ಅಲ್ಲಿನ ಅನೇಕ ಪ್ರದೇಶಗಳಲ್ಲಿ ಕಾವ್ಯ ತುಂಬಾ ಪ್ರಸಿದ್ಧಿ ಪಡೆದಿದೆ. ಹಾಲುಮತ ಸಮುದಾಯಕ್ಕೆ ಸೇರಿದ ಕಾವ್ಯ ಸಮುದಾಯದ ಸೃಷ್ಠಿ ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಅಲ್ಲದೆ ಕಾವ್ಯದಲ್ಲಿ ಶಿವನಲೀಲೆಗಳನ್ನು ಹೆಚ್ಚಾಗಿ ನೋಡಬಹುದು. ಲೀಲೆ, ಪವಾಡಗಳಿಂದ ಸಮುದಾಯದಲ್ಲಿ ಪರಂಪರೆ, ಸೃಷ್ಠಿ, ಸಂಸ್ಕೃತಿ, ಕಾಯಕದ ಮಹತ್ವ ಮುಂತಾದ ಅಂಶಗಳು ಮಹಾಕಾವ್ಯದಲ್ಲಿ ಸಲೀಲವಾಗಿ ಒಳಗೊಂಡಿವೆ.

**ಹಾಲುಮತ ಮಹಾಕಾವ್ಯದಲ್ಲಿ ಸಾಮಾಜಿಕ ರಚನೆ**

ಕೈಲಾಸದ ಹಾಡಿಕೆಯಲ್ಲಿ ಭೂಮಂಡಲದ ಸೃಷ್ಠಿ, ದೇವತೆಗಳ ಸೃಷ್ಠಿ, ರಾಕ್ಷಸರ ಸೃಷ್ಠಿ, ಅವರ ಸಂಹಾರ, ಅವುಗಳನ್ನು ಕುರಿಗಳನ್ನಾಗಿ ಪರಿವರ್ತಿಸುವುದು, ಭೂಲೋಕಕ್ಕೆ ಅವು ಬರುವುದು, ಅಲ್ಲಿಂದ ಅವುಗಳ ರಕ್ಷಣೆಗಾಗಿ ಮಾನವ ಬೊಂಬೆಗಳನ್ನು ತಯಾರಿಸಿ ದೈವ ಪವಾಡಗಳಿಂದ ಅವುಗಳಿಗೆ ಜೀವ ತುಂಬುವುದು, ಅವರಿಂದ ಕುರಿಗಳ ರಕ್ಷಣೆ ಮಾಡಿಸುವುದು ಮುಂತಾದ ಕಡೆ ಸಾಮಾಜಿಕ ಅಂಶಗಳನ್ನು ನೋಡಬಹುದು. ಏಕೆಂದರೆ ರಕ್ಷಣೆ ಇದು ಸಮಾಜದಲ್ಲಿರಬೇಕಾದ ಒಂದು ಮಹತ್ತರ ವಿಷಯ, ಯಾಕೆಂದರೆ ಕರಿಗಳನ್ನು ದೇವತೆಗಳ ರಕ್ಷಣೆ ಮಾಡಿದರು. ಕೊನೆಗೆ ಅವುಗಳಿಗೆ ಶಾಶ್ವತ ರಕ್ಷಣೆಗಾಗಿ ಮಾನವನನ್ನು ಸೃಷ್ಟಿಸಿ ಅವರನ್ನು ಕುರಿಸಾಕುವುದಕ್ಕೆ ಬಿಟ್ಟರು. ಇಲ್ಲಿಂದ ಕುರಿಸಾಕುವ ಸಾಮಾಜಿಕ ವರ್ಗ ರಚಿತವಾಯಿತೆಂದು ಕಾವ್ಯದಲ್ಲಿ ಸ್ಪಷ್ಟಪಡುತ್ತದೆ. ಬ. ಪ. ನಾಯ್ಕರು ಇವರ ಕೃತಿ 'ಹಾಲುಮತಸ್ಥರು ಪ್ರಸ್ತಾವನೆಯಲ್ಲಿ ಹಾಲುಮತಸ್ಥರ ಸಾಮಾಜಿಕ ರಚನೆಯ ಬಗ್ಗೆ ಮಾಹಿತಿ ನೀಡಿದ್ದಾರೆ.[1]

ನಂತರ ಭೂಲೋಕದಲ್ಲಿ ನಾನಾ ವಿಧಗಳಲ್ಲಿ ಸಾಮಾಜಿಕ ರಚನೆಯ ಹಂತ ನಡೆಯುತ್ತದೆ. ಅಲ್ಲಿಂದ ಶಿವನ ಲೀಲೆಗಳು ಬೆಳೆದು ಹಾಲುಮತ ಸಮುದಾಯದ ಸಾಮಾಜಿಕ ವರ್ಗದ ಉಗಮಕ್ಕೆ ನಾಂದಿಯಾಗುತ್ತದೆ. ಬೀರಪ್ಪನ ಪೂರ್ವಜರ ಬಗ್ಗೆ ಕಾವ್ಯದಲ್ಲಿ ತಿಳಿಸುವಾಗ ಸಮಾಜದಲ್ಲಿನ ಅಂಧಕಾರ, ಮೌಢ್ಯತೆ, ನಂಬಿಕೆ, ಬಯಕೆಗಳು, ಸಂಸ್ಕೃತಿಯ ಬಗ್ಗೆ ಹಲವಾರು ವಿಚಾರಗಳು ಮೂಡಿಬರುತ್ತವೆ. ಮಾಯ, ಮಂತ್ರ, ಪವಾಡಗಳು ಅಲ್ಲಿ ಕಾಣುತ್ತವೆ. ಅಲ್ಲದೆ ಶಿವನ ಲೀಲೆ ಅಲ್ಲಿ ಬಹುಮುಖ್ಯವಾಗಿರುವುದು. ಬೀರಪ್ಪನ ಪೂರ್ವಜರ ಕುರಿತು ಕಾವ್ಯವು ನಿರೂಪಿಸುವಾಗ ಕಾವ್ಯ ಆಕರ್ಷಕವಾಗಿದೆ. ಇದೇ ವೃತ್ತಾಂತದಲ್ಲಿ ಸಾಮಾಜಿಕ ಸಂರಚನೆಯ ಹಲವು

ಮಗ್ಗುಲಗಳು ಪರಿಚಯವಾಗುವವು. ಇವು ಅಂದಿನ ಸಂದರ್ಭದಲ್ಲಿ ಸಮಾಜ ನಿರ್ಮಾಣದ ರಚನೆಯ ಅಂಶಗಳು. ಇಂದಿಗೂ ಹಾಲುಮತ ಸಮುದಾಯದಲ್ಲಿ ಸಮಾಜ ರಚನೆಯ ಮೂಲ ಪ್ರೇರಕ ಅಂಶಗಳನ್ನು ಈ ಕಾವ್ಯವೇ ನಿರ್ದೇಶಿಸುತ್ತದೆ. ಒಂದು ಆದರ್ಶ ಸಮಾಜ ರಚನೆಯಲ್ಲಿ ಹಾಲುಮತ ಮಹಾಕಾವ್ಯ ತುಂಬಾ ಪ್ರಸಿದ್ಧಿ ಪಡೆದಿದೆ.

ಮಹಾಕಾವ್ಯದಲ್ಲಿ ಹಬ್ಬಗಳ ಆಚರಣಾತ್ಮಕ ವಿವರಗಳು ದೊರೆಯುತ್ತವೆ. ಸಂಕ್ರಾಂತಿ, ಯುಗಾದಿ, ಕಾರುಹುಣ್ಣಿಮೆ, ಎಳ್ಳಮವಾಸ್ಯೆ, ಗೌರಿಹಬ್ಬ, ಮುಂತಾದ ಹಬ್ಬಗಳು ಕಂಡುಬಂದಿವೆ. ಸಾಮಾಜಿಕ ಸಂರಚನೆಯ ಆಶಯಗಳನ್ನು ಇವು ಅಭಿವ್ಯಕ್ತಿಸುತ್ತವೆ. ಹಾಲುಮತ ಸಮುದಾಯದಲ್ಲಿ ಇಂದು ಆಚರಿಸುವ ಈ ಎಲ್ಲಾ ಹಬ್ಬಗಳು ಕಾವ್ಯದಲ್ಲಿ ಕಟ್ಟಲಾಗಿದೆ, ಹೇಳಲಾಗಿದೆ. ಹಾಲುಮತ ಮಹಾಕಾವ್ಯವು ಸಾಮಾಜಿಕ ಕಳಕಳಿಯಲ್ಲಿ ಅಗ್ರಮಾನ್ಯವಾದುದಾಗಿದೆ.

ಹಾಲುಮತ ಸಮುದಾಯದಲ್ಲಿ ಒಂದು ಉತ್ತಮ ಆದರ್ಶಮಯವಾದಂತ ಸಾಮಾಜಿಕ ವ್ಯವಸ್ಥೆಯಿದೆ. ಏಕೆಂದರೆ ಹಾಲುಮತ ಮಹಾಕಾವ್ಯದಲ್ಲಿ ಕಾವ್ಯದ ತುಂಬ ಸಾಮಾಜಿಕ ಸನ್ನಿವೇಶಗಳು ತುಂಬಿಕೊಂಡಿವೆ. ಅವು ಆಯಾ ಪ್ರದೇಶದಲ್ಲಿನ ಸಂಪ್ರದಾಯ ಪರಂಪರೆಗಳಾಗಿ ಹಾಗೆ ನೆಲೆನಿಂತಿವೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಇಂದು ಎಲ್ಲಾ ಅಭದ್ರತೆ, ಅಶಾಂತಿ, ರಾಕ್ಷಸತ್ವಗಳು, ರಕ್ತಪಾತಗಳು ಇದ್ದರೂ ಸಮಾಜದಲ್ಲಿ ಸಂಸ್ಕೃತಿ, ಸಂಪ್ರದಾಯ, ಆದರ್ಶಗಳು, ಪರಂಪರೆ ಇವುಗಳ ಉಳಿವನ್ನು ಇನ್ನೂ ಕಾಣಬಹುದಾಗಿದೆ. ಏಕೆಂದರೆ ಇವು ಜನರ ಜೀವನಾಡಿಗಳಾಗಿವೆ. ಹಾಗಾಗಿ ಹಾಲುಮತ ಮಹಾಕಾವ್ಯದಂತ ಒಂದು ಕಾವ್ಯವು ಸಾಮಾಜಿಕ ಸಂರಚನೆಯಲ್ಲಿ ತನ್ನ ಬದುಕಿನ ವಿಧಾನವನ್ನು ನಿರ್ದೇಶಿಸುವಲ್ಲಿ ತನ್ನದೇ ಆದ ಪಾತ್ರವನ್ನು ನಿರ್ವಹಿಸುತ್ತಿದೆ.

ಸಂಪ್ರದಾಯವೆಂದರೆ ಮೊದಲಿನಿಂದಲೂ ಕಾರ್ಯವನ್ನು ಆಚರಿಸಿಕೊಂಡು ಬರುವುದು. ಅದಕ್ಕೆ ಇತಿಹಾಸ, ಐತಿಹ್ಯ, ಪುರಾಣ ಎಲ್ಲಾ ಇರುತ್ತದೆ. ಹಾಗಾಗಿ ಅದನ್ನು ನಡೆಸಿಕೊಂಡು ಬರುವುದು ಸಮಾಜದಲ್ಲಿ ಕಾಣಬಹುದು. ಜನನವಾದ ಮೇಲೆ ಮಗುವಿನ ಸಮಸ್ತ ಕಾರ್ಯವಿಧಿನಾಗಳು, ಬೆಳೆಸುವ ಪದ್ಧತಿಗಳು ಅವನು ಜೀವನದ ದೂರದೃಷ್ಠಿಯ ಮೌಲ್ಯಗಳು, ಅವನ ಮದುವೆ, ಸಂಸಾರ, ಪ್ರೀತಿ, ವಾತ್ಸಲ್ಯ ಇವೆಲ್ಲಾ ಸಮಾಜದಲ್ಲಿ ಕಾಣುವ ಸಂಪ್ರದಾಯದ ನಂಬಿಕೆಗಳ ಆಚರಣೆಗಳು ಇವೆಲ್ಲಾ ಸಮುದಾಯದಿಂದ ಮೊದಲಿನಿಂದಲೂ ಬಂದಿರುವಂತಹವು. ಕಾವ್ಯದಲ್ಲಿ ಈ ಎಲ್ಲಾ ಅಂಶಗಳನ್ನು ನೋಡಬಹುದಾಗಿದೆ. ಕಾವ್ಯದ ಆರಾಧಕರಾಗಿರುವ ಸಮುದಾಯದ ಭಕ್ತಿ ಸಮೂಹ ಜನರು ಈ ಆಚರಣೆಗಳನ್ನು ನಡೆಸುತ್ತ ಬಂದಿದ್ದಾರೆ.

ಕುರಿಸಾಕಾಣಿಕೆ, ಹೈನುಗಾರಿಕೆ, ವ್ಯಾಪಾರ, ಸಂಬಂಧಗಳು ಇವು ಹಾಲುಮತ ಮಹಾಕಾವ್ಯದಲ್ಲಿ ಬರುವ ವೃತ್ತಿಗಳು. ಇವುಗಳಿಂದಲೆ ಅದಕ್ಕೆ ಆ ಹೆಸರು ಬಂದಿರುವುದು. ದೇವಾನುದೇವತೆಗಳು ಕುರಿಗಳನ್ನು ಪೋಷಿಸುತ್ತಿರುವುದು ಅದಲ್ಲದೆ ಅವುಗಳನ್ನೆ ಜೀವನದ ಕಸುಬಾಗಿ ಮಾಡಿಕೊಂಡಿರುವುದರಿಂದ ಆ ಕಾವ್ಯದ ಸಮುದಾಯದ ಜನರು ಸಮಾಜದಲ್ಲಿ ಕುರಿಸಾಕಾಣಿಕೆ ಒಂದು ಜೀವನವನ್ನಾಗಿ ಮಾಡಿಕೊಂಡಿದ್ದಾರೆ. ಅದನ್ನು ಅವರು ಜೀವನದ ಸಂಜೀವಿನಿ ಎಂದು ವ್ಯಾಖ್ಯಾನಿಸಿದ್ದಾರೆ.

ಎಮ್ಮೆಗಳನ್ನು ಸಾಕುವುದು, ಹಸುಗಳನ್ನು ಸಾಕುವುದು, ವ್ಯವಸಾಯ ಮಾಡುವುದು ಮುಂತಾದವು ಹಾಲುಮತ ಸಮುದಾಯದಲ್ಲಿ ನಡೆದುಕೊಂಡು ಬಂದಿರುವಂತವು. ಹಾಗಾಗಿ ಸಮಾಜದಲ್ಲಿ ಇಂದಿಗೂ ಇವುಗಳ ಪರಿವರ್ತನೆಯನ್ನು ನಾವು ಗಮನಿಸಬಹುದಾಗಿದೆ. ಹಾಲಿನ ಉತ್ಪನ್ನಗಳು, ಸಹಕಾರ ಮುಂತಾದವು ಸಮಾಜದಲ್ಲಿ ನಿರ್ವಹಿಸುತ್ತವೆ.

ವ್ಯಾಪಾರ ಇದು ಸಮಾಜ ರಚನೆಯಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿಕೊಂಡಿದೆ. ಕಂಬಳಿ ವ್ಯಾಪಾರ, ಹಾಲುವ್ಯಾಪಾರ, ~~ಹಾಲುವ್ಯಾಪಾರ~~, ಕೃಷಿ ಉತ್ಪನ್ನದ ವ್ಯಾಪಾರ, ಸಂಪತ್ತು ಮುಂತಾದ ವ್ಯಾಪಾರವನ್ನು ಕಾವ್ಯದಲ್ಲೂ ಕಾಣಬಹುದಾಗಿದೆ. ಹಾಗಾಗಿ ಆಯಾ ಸಮುದಾಯದ ಜನರು ಆ ವೃತ್ತಿಗಳನ್ನು ಅವಲಂಬಿಸಿದ್ದಾರೆ.

ಸಮಾಜದಲ್ಲಿ ವ್ಯಾಪಾರವು ಇಂದು ದೊಡ್ಡ ಕಾಯಕವಾಗಿ ಬೆಳೆದಿದೆ. ಎಲ್ಲಾ ಕ್ಷೇತ್ರಗಳಲ್ಲಿ, ವ್ಯಾಪಾರವು ಒಂದು ಭಾಗವಾಗಿದೆ. ಕೊಡುವುದು, ತೆಗೆದುಕೊಳ್ಳುವುದು, ವ್ಯಾಪಾರದಿಂದ ಜನರ ನಂಬಿಕೆ, ಬಯಕೆಗಳು

ಶ್ರೀಮಂತವಾಗಿರುತ್ತವೆ. ಕಾಲ ತೀವ್ರಗತಿಯಲ್ಲಿ ಬೆಳೆಯುತ್ತ ಸಾಗಿರುವುದರಿಂದ ಸಂಪ್ರದಾಯ ಸಂಸ್ಕೃತಿಗೆ ಧಕ್ಕೆ ಬಂದರೂ ಅವುಗಳ ಛಾಯೆಯಲ್ಲಿ ಎಲ್ಲವೂ ಇನ್ನೂ ಉಸಿರಾಡುತ್ತಿವೆ.

ಸಮಾಜದಲ್ಲಿ ವಿದೇಶಿ ವ್ಯಾಮೋಹವಿದ್ದರೂ, ಸಮುದಾಯಗಳ ಪರಂಪರೆಗೆ ಗೌರವವಿದೆ. ಪೂಜೆ, ಪನಸ್ಕಾರ, ದೇವಾಲಯ, ಉಪಾಸನೆ, ದಾಸೋಹ, ಜಾತ್ರೆಗಳು, ಉತ್ಸವಗಳು, ಪರಿಷೆಗಳು, ಸಂಬಂಧಗಳು, ಸಂಸ್ಕೃತಿಯ ಗೌರವಗಳು, ಎಲ್ಲವೂ ಇನ್ನು ಹಚ್ಚಹಸಿರಾಗಿವೆ. ಇದಕ್ಕೆಲ್ಲ ಸಮುದಾಯಗಳ ಪರಂಪರೆಯ ಮೂಲವೇ ಕಾರಣವಾಗಿದೆ.

ಹಾಲುಮತ ಕಾವ್ಯದ ಸಂದೇಶ, ದೈವಲೀಲೆಗಳು, ಪವಾಡಗಳು, ಕಾಯಕ ಪ್ರವೃತ್ತಿಗಳು, ಅವರ ಸಾಧನೆಗಳು ಎಲ್ಲಾ ಸಮಾಜದ ರಕ್ಷಣೆಗಾಗಿ ಸಮಾಜದ ಉದ್ಧಾರಕ್ಕಾಗಿ ಮಾಡಿರುವಂತಹವು. ಹಾಗಾಗಿ ಸಮಾಜದ ರಚನೆಯಲ್ಲಿ ಹಾಲುಮತ ಮಹಾಕಾವ್ಯ ತುಂಬಾ ಸಹಕಾರಿಯಾಗಿದೆ. ಸಾರಸತ್ವವಾಗಿದೆ.

ಸಮಾಜದ ಉನ್ನತಿಗಾಗಿ ಶಿವನು ತನ್ನ ಅವತಾರಗಳನ್ನು ಮನುಷ್ಯರ ರೂಪದಲ್ಲಿ ತಾಳಿ ಮಾನವ ಸಮಾಜದ ಅಂಧಕಾರವನ್ನೆಲ್ಲ ಅಳಿಸಿ, ಅವನ ದುರಹಂಕಾರ ವಿಕೃತ ಬಯಕೆಗಳಿಗೆ ಕಡಿವಾಣ ಹಾಕಿ, ದುರಹಂಕಾರವನ್ನು ದೂರ ಮಾಡಿ, ನಿಸ್ವಾರ್ಥ ಸೇವೆ, ನಂಬಿಕೆ, ಸಂಬಂಧಗಳ ಗೌರವ ಇವುಗಳನ್ನು ರೂಪಿಸುವಲ್ಲಿ ದೇವರು ತಾನೇ ಭೂಲೋಕಕ್ಕೆ ಬಂದು ಈ ಪರಿವರ್ತನೆ ಮಾಡುವಲ್ಲಿ ಸೃಷ್ಠಿಕರ್ತನಾಗಿದ್ದಾನೆ.

ಕಾವ್ಯದಲ್ಲಿ ದೇವರ ಪವಾಡಗಳು, ಲೀಲೆಗಳನ್ನು ನೋಡಿದರೂ ಆತನಿಂದ ಸುಖಸಮೃದ್ಧಿ ಸಿಗಲೆಂದು ಭಕ್ತರು ಆತನನ್ನು ಸ್ಮರಿಸುತ್ತಾರೆ. ಅವರು ಅದೇ ಸಂಪ್ರದಾಯ ಬೆಳೆಸಿಕೊಂಡು ಹೋಗಿ, ಸಂಸ್ಕೃತಿಯ ಉಳಿವಿಗೆ ಅವರೆ ನಾಂದಿಯಾಡುತ್ತಾರೆ. ಹಾಗಾಗಿ ಸಮಾಜದ ರಚನೆಯಲ್ಲಿ ಹಾಲುಮತ ಮಹಾಕಾವ್ಯ ಸಂಪೂರ್ಣ ಜವಾಬ್ದಾರಿಯುತವಾಗಿದೆ.

ಆದರ್ಶದ ಸಮಾಜದ ರಚನೆಯಲ್ಲಿ ಪ್ರತಿಯೊಂದು ಅಂಶಗಳ ಮೂಲವನ್ನು, ಅವುಗಳ ಕಾರ್ಯವನ್ನು, ಅವುಗಳ ಸಂಸ್ಕೃತಿಯನ್ನು ಹಾಲುಮತ ಮಹಾಕಾವ್ಯ ತೋರಿಸಿ ಕೊಟ್ಟಿದೆ. ಹಾಲುಮತ ಸಮುದಾಯದವರು ಮಾಡುವ ಪೂಜೆ, ಭಕ್ತಿ, ಆಚರಣೆ, ನಂಬಿಕೆಗಳು, ಸಂಪ್ರದಾಯಗಳು, ವ್ಯಾಪಾರ, ಕಾಯಕಗಳು, ಸಂಬಂಧಗಳು, ಉತ್ಸವಗಳು, ಜಾತ್ರೆಗಳು, ಪವಾಡಗಳು ಮುಂತಾದವುಗಳಲ್ಲಿ ಹಾಲುಮತ ಮಹಾಕಾವ್ಯ ಹಾಕಿಕೊಟ್ಟ ದಾರಿದೀಪವಾಗಿದೆ. ಅವು ಇಂದು ಸಾಮಾಜಿಕ ರಚನೆಯಲ್ಲಿ ಪ್ರಬುದ್ಧಮಾನವಾದ ಕಾರ್ಯವನ್ನು ಮಾಡುತ್ತಿವೆ.

ಹೀಗೆ ಹಾಲುಮತ ಮಹಾಕಾವ್ಯವು ಸಾಮಾಜಿಕ ರಚನೆಯಲ್ಲಿ ಎಲ್ಲಾ ರೀತಿಯಿಂದಲೂ ಭಾಗಿಯಾಗಿದೆ. ಜನತೆಯ ಮನೋಪ್ರವೃತ್ತಿಯಂತೆ ಸಮುದಾಯದ ಸಂಸ್ಕೃತಿಯಂತೆ ಇಂದು ಸಮಾಜ ನಿರ್ಮಾಣವಾಗುವುದನ್ನು ನೋಡಬಹುದಾಗಿದೆ.

**ಅಡಿ ಟಿಪ್ಪಣಿ**

೧. ಬ. ಪ. ನಾಯ್ಕರ, **ಹಾಲುಮತಸ್ಥರು** ಕೃತಿಯ ಪ್ರಸ್ತಾವನೆ.

**ಕವಿಯ ವ್ಯಕ್ತಿತ್ವ**

'ಜನಪದ ಹಾಲುಮತ ಮಹಾಕಾವ್ಯ' ಮಹಾಕಾವ್ಯಗಳಲ್ಲೊಂದಾದರೂ ಜನಪದ ಲೋಕದ ಮೌಖಿಕ ಸಂಪ್ರದಾಯದ ಜೀವನವನ್ನು ಪ್ರತಿಬಿಂಬಿಸುವಲ್ಲಿ ಯಶಸ್ವಿಯಾಗಿದೆ. ತಲೆತಲೆಮಾರುಗಳಿಂದ ಹರಿದುಕೊಂಡು ಬಂದಂತ ಪರಂಪರೆ, ಸಂಸ್ಕೃತಿ, ನಂಬಿಕೆ, ಭಕ್ತಿ, ಶ್ರದ್ಧೆ, ಆಚರಣೆ ಎಲ್ಲವೂ ಮೌಖಿಕ ಸಂಪ್ರದಾಯದಲ್ಲಿ ಹೊಸ ಹೊಸ ರೂಪ ಪಡೆದುಕೊಂಡು ಸಾಗುತ್ತಿವೆ. ಅವುಗಳಿಗೆ ನವಚೇತನ ದೊರಕಿಸಿಕೊಟ್ಟಂತಾಗುತ್ತದೆ. ಅವುಗಳಿಗೆ ಜೀವಾಳ ಜನಪದ ಲೋಕವಾಗುತ್ತದೆ.

ಮಹಾಕಾವ್ಯವನ್ನು ಒಬ್ಬ ಮಹಾಕವಿ ಹಾಡಿ ಅದನ್ನು ತನ್ನ ಹೃದಯದಲ್ಲಿ ಕರಗತಗೊಳಿಸಿಕೊಂಡಿದ್ದಾನೆ. ಅದರ ಬಗ್ಗೆ ಗೌರವ, ಪ್ರೀತಿ, ನಂಬಿಕೆ, ಭಕ್ತಿ, ಎಲ್ಲಾ ಆ ಮಹಾಕವಿಯಲ್ಲಿ ತುಂಬಿಕೊಂಡಿದೆ. ಆತ ಅನಕ್ಷರಸ್ಥನಾದರೂ ಅದನ್ನು ಹಾಡಿನ ರೂಪದಲ್ಲಿ ಸರಾಗವಾಗಿ ಹಾಡುವಂತ ಪ್ರತಿಭೆ ಹೊಂದಿದ್ದಾನೆ. ಇದು ಆತನಿಗೆ ತನ್ನ ಗುರುವಿನಿಂದ ಬಂದಂತ ವರವಾಗಿದೆ.

ಹಾಲುಮತ ಮಹಾಕಾವ್ಯವು ಹಾಲುಮತ ಸಮುದಾಯಕ್ಕೆ ಸಂಬಂಧಿಸಿದ ಮಹಾಕಾವ್ಯ ಹಾಲುಮತ ಸಮುದಾಯದಲ್ಲಿ ಪವಾಡ ಪುರುಷರ ಅಸಾಮಾನ್ಯ ಸಾಧನೆ, ಸಮುದಾಯಪರವಾಗಿ ಲೋಕಕಲ್ಯಾಣ ಕಾರ್ಯಗಳು, ಸಮುದಾಯದ ರಕ್ಷಣೆಗೆ ಸಮುದಾಯದ ಸಂಸ್ಕೃತಿಯ ವೈಭವತೆ ಸಾರುವುದು. ಸಮುದಾಯದಲ್ಲಿ ಸಂಬಂಧಗಳು, ನಂಬಿಕೆಗಳು, ಸಾಮಾಜಿಕ ರಚನೆಯ ಅಂಶಗಳು, ಜೀವನಕಾಯಕಗಳು, ದೇವರ ಭಕ್ತಿ ಪವಾಡಗಳು, ಹೀಗೆ ಹತ್ತು ಹಲವು ಸಂಸ್ಕೃತಿ ಬಿಂಬಿಸುವ ಅನೇಕ ಅಂಶಗಳು ಸಮುದಾಯದ ಪರವಾಗಿ ಮಹಾಕಾವ್ಯದಲ್ಲಿ ಸೇರಿಕೊಂಡಿವೆ.

ಮಹಾಕಾವ್ಯಕ್ಕೆ ಪರಂಪರೆಯಿದೆ. ಮೌಲ್ಯವಿದೆ. ಅದರ ಶ್ರೀಮಂತಿಕೆಗೆ ಅದರ ಸಂಸ್ಕೃತಿಯೆ ಸಾಕ್ಷಿಯಾಗಿದೆ. ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರುವ ಈ ಹಾಲುಮತ ಮಹಾಕಾವ್ಯ ಸಮುದಾಯದ ವಿಭಿನ್ನ ಸಂಸ್ಕೃತಿ ಸಾರುವಲ್ಲಿ ಯಶಸ್ವಿಯಾಗಿದೆ. ಇದು ನಾದ, ಭಕ್ತಿ, ಹಾಡು, ಚರಣಗಳಿಂದ ತುಂಬಿಕೊಂಡಿದೆ ಇದು ಹಾಡುಗಾರರಿಂದ ಸಂಗ್ರಹಮಾಡಿಕೊಂಡಿರುವಂತ ಮಹಾಕಾವ್ಯವಾಗಿದೆ.

'ಜನಪದ ಹಾಲುಮತ ಮಹಾಕಾವ್ಯ'ದ ಮುಖ್ಯ ಹಾಡುಗಾರ 'ಸಿದ್ದಪ್ಪ ಮೇಟಿ' ತಂದೆ 'ಭೀಮಪ್ಪ ಮೇಟಿ' ಇವರ ತಾಯಿಯ ಹೆಸರು ನಾಗಮ್ಮ. ಈಗ ಸಿದ್ದಪ್ಪನಿಗೆ ಎಂಬತ್ತರ ಸುತ್ತಮುತ್ತಲಿನ ವಯಸ್ಸು, ಸಿದ್ದಪ್ಪನ ಹೆಂಡತಿ ಅಕ್ಕಮ್ಮ ಇವರಿಗೆ ಎಂಟು ಜನ ಮಕ್ಕಳು. ಈರಮ್ಮ ಮಾಯಮ್ಮ, ಮಹಾದೇವಮ್ಮ, ಗೌರಮ್ಮ ಹಾಗೂ ಸಂಗಮ್ಮ ಈ ಐದು ಜನ ಹೆಣ್ಣುಮಕ್ಕಳು, ತಿಪ್ಪಣ್ಣ, ಶಿವಸೇನಿ, ಭೀಮಪ್ಪ ಈ ಮೂರು ಜನ ಗಂಡುಮಕ್ಕಳು. ಈ ಎಲ್ಲಾ ಮಕ್ಕಳ ಮದುವೆಯಾಗಿ ಅನೇಕ ಮೊಮ್ಮಕ್ಕಳಿಗೆ ಅಜ್ಜನಾಗಿದ್ದಾನೆ ಈ ಸಿದ್ದಪ್ಪ.

ಸಿದ್ದಪ್ಪನ ಊರು ಸೈದಾಪುರ, ಕಲಬುರ್ಗಿ ಜಿಲ್ಲೆಯ ಶಹಪುರ ತಾಲ್ಲೂಕಿನ ಸಣ್ಣ ಹಳ್ಳಿ. ಶಹಪುರಕ್ಕೆ ಹತ್ತಿಕೊಂಡಿರುವ ಕೃಷ್ಣಾಮೇಲ್ದಂಡೆ ಯೋಜನೆಯ ಕಛೇರಿ ಹೊಂದಿರುವ ಭೀಮರಾಯನ ಗುಡಿಯಿಂದ ಸಿದ್ದಪ್ಪನ ಊರಿಗೆ ಎರಡ್ಮೂರು ಕಿ.ಮೀ. ದೂರದ ದಾರಿ ಮಾತ್ರ ಯಾವಾಗಲಾದರೊಂದು ಟೆಂಪೋ, ಬಸ್ಸು ಹೋಗುವ ಈ ಊರಿಗೆ, ಆ ಊರಿನ ಜನ ಶಹಪುರದ ಸಂತೆ ಮಾಡಿಕೊಂಡು ಭೀಮರಾಯನ ಗುಡಿಯಿಂದ ನಡೆದು ಹೋಗುವುದೇ ಜಾಸ್ತಿ.

ಸಿದ್ಧಪ್ಪನು ಹಾಡಲು ಕಲಿತದ್ದು 'ಸಾಯಬಣ್ಣ ಕಲ್ಲಪ್ಪ ವಾಗಕೋಡಿ' ಎಂಬುವರಿಂದ. ಪ್ರತಿ ಹಾಡುಗಾರಿಕೆಯ ಪ್ರಾರಂಭದಲ್ಲಿ ಬರುವ ದಾರಸಂಗ ಮತ್ತು ಸಾಯಬಣ್ಣ ಎನ್ನುವ ಹೆಸರುಗಳು ಗುರುವಿಗೆ ಸಂಬಂಧಪಟ್ಟವು. ದಾರಸಂಗ, ಸಾಯಬಣ್ಣ ಊರು ಸೋಲಾಪುರ ಸಮೀಪದಲ್ಲಿದೆಯಂತೆ. ಸಾಯಬಣ್ಣನು ಸೋಲಾಪುರದ ಒಂದು ಮಿಲ್ಲಿನಲ್ಲಿ ಕೆಲಸ ಮಾಡುತ್ತಿದ್ದನಂತೆ. ಸಿದ್ದಪ್ಪನದು ಒಕ್ಕಲುತನ ಮನೆತನ. ಆರ್ಥಿಕ ತೊಂದರೆಯಿಂದಾಗಿ ತನ್ನ ತಾರುಣ್ಯದಲ್ಲಿ ದುಡಿಯಲು ಸೋಲಾಪುರ ಮಿಲ್ಲಿಗೆ ಸೇರಿದ. ಅದು ಸಾಯಬಣ್ಣ ಕೆಲಸ ಮಾಡುವ ಮಿಲ್ಲೇ ಆಗಿತ್ತು. ಇವರ ಸ್ಥಳವು ಒಂದೇ ಕಡೆಯಾಗಿ ದಿನವೂ ಇಬ್ಬರು ಹೋಗಿ ಬರುತ್ತ ಪರಸ್ಪರ ವಿಶ್ವಾಸ ಮೂಡಿತು. ಹೀಗಾಗಿ ಜಾನಪದ ಹಾಲುಮತ ಮಹಾಕಾವ್ಯದ ಉತ್ತಮ ಹಾಡುಗಾರನಾದ ಸಾಯಬಣ್ಣನು ಸಿದ್ದಪ್ಪನನ್ನು ಕರೆದುಕೊಂಡು ಹೋಗತೊಡಗಿದ. ಸುಮಾರು ಎರಡ್ಮೂರು ವರ್ಷಗಳ ಅವಧಿಯಲ್ಲಿ ಸಿದ್ದಪ್ಪ ಸ್ವತಂತ್ರವಾಗಿ ಹಾಡುವಷ್ಟು ತಯ್ಯಾರಾದ. ಅಷ್ಟರಲ್ಲೆ ಅವನಿಗೆ ಮದುವೆಯಾಯಿತು. ಹೆಂಡತಿ ಜೊತೆ ತನ್ನೂರಿನಲ್ಲಿ ಒಕ್ಕಲುತನ ಮಾಡುತ್ತ ಬದುಕು ಸಾಗಿಸತೊಡಗಿದ. ತನ್ನದೇ ಒಂದು ಗುಂಪನ್ನು ತಯಾರಿಸಿಕೊಂಡು ಹಾಡಲು ತೊಡಗಿದನು. ಸುಮಾರು ೧೯೭೪ರ ರಿಂದ ಸ್ವತಂತ್ರವಾಗಿ ಹಾಡುತ್ತಿದ್ದನೆಂದು ಸಿದ್ದಪ್ಪನು ಹೇಳಿದ್ದಾನೆ. ಸಿದ್ದಪ್ಪನು ತನ್ನ ಯೌವನದಿಂದಲೂ ಹಾಲುಮತ ಪುರಾಣವನ್ನು ಹಾಡುತ್ತಲೆ ಊರೂರು ತಿರುಗಿದ್ದಾನೆ. ಆತ ಮುಖ್ಯವಾಗಿ ಗಳಿಸಿದ್ದು ಜನರ ಮರ್ಯಾದೆ, ಸುತ್ತ ಊರುಗಳಲ್ಲೆಲ್ಲ ಇವರ ಶಿಷ್ಯರ ಸಂಖ್ಯೆ ಇದೆ. ಹೋದಲ್ಲೆಲ್ಲ ಈತನ ಕಾಲಿಗೆ ನಮಸ್ಕರಿಸಿ ಮರ್ಯಾದೆ ಮಾಡುವಷ್ಟು ಸಿದ್ದಪ್ಪ ಗೌರವ ಗಳಿಸಿಕೊಂಡಿದ್ದಾನೆ.

ಈತ ಹೀಗೆ ತಿರುಗುತ್ತಾ ಇರಬೇಕಾದರೆ ಮಡದಿ ಅಕ್ಕವ್ವಳೇ ಮನೆಯ ಸಂಸಾರವನ್ನೆಲ್ಲ ತೂಗಿಕೊಂಡು ಹೋಗಿದ್ದಾಳೆ. ಒಂದು ದಿನವೂ ಈತ ಊರಿಗೆ ಹೋಗುವುದನ್ನು ಅಕ್ಕಮ್ಮ ತಡೆಯದೇ ಇರುವುದನ್ನು ಸಿದ್ದಪ್ಪ ಈ ಇಳಿ ವಯಸ್ಸಿನಲ್ಲಿ ನೆನೆದುಕೊಳ್ಳುತ್ತಾನೆ. ಮಕ್ಕಳೆಲ್ಲರೂ ಪಾಲಾದರೂ ಈ ಸಿದ್ದಪ್ಪ ತನ್ನ ಹೆಂಡತಿ ಅಕ್ಕಮ್ಮನೊಂದಿಗೆ ಖುಷಿಯಿಂದಲೆ ಜೀವಿಸುತ್ತಿದ್ದಾನೆ.

ಸಿದ್ದಪ್ಪ ಇಡೀ ಜೀವನವನ್ನು ಹಾಡುತ್ತಲೇ ಕಳೆದಿದ್ದಾನೆ. ಆದ್ದರಿಂದ ಅವನಿಗೆ ತೊಂದರೆ ಏನೂ ಆಗಿಲ್ಲ. ಬದಲಾಗಿ ಸ್ವಲ್ಪ ಅನುಕೂಲವೇ ಆಗಿದೆ. ಜಾನಪದದ ಅರೆಪ್ರಸಾರದ ಇಂದಿನ ದಿನಗಳಲ್ಲಿ ಸಿದ್ದಪ್ಪನಿಗೆ ೮೦ ರ ವಯಸ್ಸು ಆವರಿಸಿದಾಗ ಅವರಿಗೆ ಜಾನಪದ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಬಂದಿದೆ. ಮುಪ್ಪಿನ ಕಾಲಕ್ಕೆ ಸಿದ್ದಪ್ಪ ಸರ್ಕಾರದ ಸಹಾಯದ ಆಸೆ ಹೊತ್ತುಕೊಂಡು ಕುಂತಂತಾಗಿದೆ.

ಜನಪದ ಹಾಲುಮತ ಮಹಾಕಾವ್ಯವು ಸಂಪೂರ್ಣವಾಗಿ ಹಾಡಿನ ರೂಪದಲ್ಲಿರುವ ಪದ್ಯಕೃತಿ. ಅಂಶಗಣನ್ವಯವಾದ ಇಲ್ಲಿಯ ಸಾಲುಗಳು ಹಿಗ್ಗುತ್ತ, ಕುಗ್ಗುತ್ತ ಪುನಾರಾವರ್ತನೆಯಾಗುತ್ತ ಮುಂದೆ ಸಾಗುತ್ತವೆ. ಇಲ್ಲಿಯ ಒಂದು ಸಾಲು ಒಂದು ಗಾಥೆ ಯ ಸ್ವರೂಪದಂತೆ ಎರಡು ಹೋಳುಗಳಾಗಿ ಕಾಣುತ್ತದೆ. ಒಂದು ಸಾಲಿನ ಎರಡನೇ ಭಾಗವು ಕಥೆಯ ಎಳೆಯನ್ನು ಮುಂದಕ್ಕೊಯ್ಯುವುದರೊಂದಿಗೆ ಸಾಲಿನಲ್ಲಿ ಹೊಸ ಅಂಶ ಸೇರಿಸಿಕೊಳ್ಳುವ ಬೇರಾಗಿ ಪರಿಣಮಿಸಿದೆ.

ಹಾಲುಮತ ಮಹಾಕಾವ್ಯದ ಹಾಡುಗಾರನಾದ ಸಿದ್ದಪ್ಪ ಆತನ ಸಂಗಡಿಗರ ವಿವರ

೧. ಸಿದ್ದಪ್ಪ ಭೀಮಪ್ಪ ಮೇಟಿ (ಮುಖ್ಯಹಾಡುಗಾರ) ವಯಸ್ಸು: ೮೦, ಶಿಕ್ಷಣ: ಇಲ್ಲ

ಜಾತಿ: ಕುರುಬ, ಊರು: ಸೈದಾಪುರ, ತಾ: ಶಹಪುರ, ಜಿ: ಕಲಬುರ್ಗಿ

೨. ಶಿವಗೇನಿ ಸಿದ್ದಪ್ಪ ಮೇಟಿ (ಜೊತೆ ಹಾಡುಗಾರ)

ವಯಸ್ಸು: ೩೫, ಶಿಕ್ಷಣ: ಇಲ್ಲ, ಜಾತಿ: ಕುರುಬ

೩. ತಿಪ್ಪಣ್ಣ ಸಿದ್ದಪ್ಪ ಮೇಟಿ (ಹಿಮ್ಮೇಳ)

ವಯಸ್ಸು: ೪೦, ಶಿಕ್ಷಣ: ಇಲ್ಲ, ಜಾತಿ: ಕುರುಬ

೪. ಮಹಾದೇವ ಶಿವಪ್ಪ ಬಿರುದಾರ (ಹಿಮ್ಮೇಳ)

ವಯಸ್ಸು: ೩೦, ಶಿಕ್ಷಣ: ಇಲ್ಲ, ಜಾತಿ: ಕುರುಬ

೫. ಭೀಮಣ್ಣ ಹಣಮಂತ ಅಳ್ಳೊಳ್ಳಿ (ಹಿಮ್ಮೇಳ)

ವಯಸ್ಸು: ೩೮, ಶಿಕ್ಷಣ: ಇಲ್ಲ, ಜಾತಿ: ಕುರುಬ

೬. ಮಾಳಪ್ಪ (ಹಿಮ್ಮೇಳ)

ವಯಸ್ಸು: ೩೩, ಶಿಕ್ಷಣ: ಇಲ್ಲ, ಜಾತಿ: ಕುರುಬ

೭. ಮಾಳಿಗೆಪ್ಪ ಮೇಟಿ (ಹಿಮ್ಮೇಳ)

ವಯಸ್ಸು: ೨೮, ಶಿಕ್ಷಣ: ಇಲ್ಲ, ಜಾತಿ: ಕುರುಬ

೮. ಸಿದ್ದಪ್ಪ ಮೇಟಿ (ಹಿಮ್ಮೇಳ)

ವಯಸ್ಸು: ೬೮, ಶಿಕ್ಷಣ: ಇಲ್ಲ, ಜಾತಿ: ಕುರುಬ

ಮೇಲಿನ ಎಲ್ಲಾ ವಿಚಾರಗಳು ಹಾಲುಮತ ಕಾವ್ಯದ ಹಾಡುಗಾರರ ಮತ್ತು ಸಂಗಡಿಗರು ನೀಡಿದ ವಿವರಗಳಾಗಿವೆ. ಇವರು ಅನಕ್ಷರಸ್ಥರಾಗಿದ್ದರೂ ಬಕ್ತಿ, ಶ್ರದ್ಧೆ, ಗೌರವಗಳಿಂದ ತಾವು ಕಲಿತ ಕಾವ್ಯವನ್ನು ಹಾಡಲು ಉತ್ಸಾಹ ತೋರಿಸಿದ್ದಾರೆ. ಇವರು ಅನೇಕ ಕಡೆಗಳಲ್ಲಿ ಅಸಂಖ್ಯಾತ ಪ್ರದರ್ಶನಗಳನ್ನು ನೀಡಿದ್ದಾರೆ.

**ವರ್ತಮಾನ**

ಜಾನಪದವು ಇಂದು ತನ್ನನ್ನು ತಾನು ಪುನರ್‌ವ್ಯಾಖ್ಯಾನಿಸಿಕೊಳ್ಳುವ ತುರ್ತು ಹಿಂದೆಂದಿಗಿಂತಲೂ ಇಂದು ಹೆಚ್ಚಾಗಿದೆ. ಜಾನಪದವು ಕೇವಲ ಸಂಗ್ರಹಗಳಾಗಿ ಮಾತ್ರ ಉಳಿಯದೆ ಸಂಗ್ರಹಿತ ಕಾವ್ಯ, ಹಾಡು, ಕಥೆ ಎಲ್ಲವೂ ಭಿನ್ನ ಮತ್ತು ಆಧುನಿಕ ನೆಲೆಗಳಲ್ಲಿ ವ್ಯಾಖ್ಯಾನಗೊಂಡಾಗ ಮಾತ್ರ ಜನಪದದ ಆಶಯಗಳನ್ನು ಆ ಮೂಲಕ ಸಂಸ್ಕೃತಿಯೊಂದರ ಪುನರ್‌ಶೋಧವನ್ನು ಕೈಗೊಳ್ಳಲು ಸಾಧ್ಯ. ಈ ನಿಟ್ಟಿನಲ್ಲಿ ಹಾಲುಮತ ಮಹಾಕಾವ್ಯವನ್ನು ಅಧ್ಯಯನಿಸಲು ಪ್ರಯತ್ನಿಸಲಾಗಿದೆ.

ಹಾಗೆಯೇ ಹಾಲುಮತ ಮಹಾಕಾವ್ಯವನ್ನು, ಹಾಡುಗಾರನನ್ನು ಶ್ರೀ ಸಿದ್ದಪ್ಪ ಮೇಟಿ ಇವರನ್ನು ಶೋಧಿಸಿ ಗುರುತಿಸಿದ ಕೀರ್ತಿ ಡಾ. ಬಿ. ಬಿ. ಹೆಂಡಿ ಅವರಿಗೆ ಸಲ್ಲುತ್ತದೆ.

ಡೊಳ್ಳಿನ ಹಾಡುಗಳನ್ನು ಕುರಿತ ಮಾಹಿತಿ ಸಂಗ್ರಹಕ್ಕಾಗಿ ತಮ್ಮ ಊರಿನ ಕಡೆ ಕ್ಷೇತ್ರಕಾರ್ಯಕ್ಕೆ ಹೋಗುವಾಗ ಶಹಪುರದ ಸಮೀಪ ಬಸ್ಸಿನಲ್ಲಿಯೇ ಈ ಮಹಾಕಾವ್ಯದ ಹಾಡುಗಾರ ಶ್ರೀ ಸಿದ್ದಪ್ಪ ಮೇಟಿಯವರ ಭೇಟಿಯಾಯಿತು. ಅಲ್ಲಿ ತಿಳಿದುಕೊಂಡ ವಿಚಾರ ಅತಿ ಉತ್ಕೃಷ್ಟವಾದುದು. ಅವರೊಬ್ಬರು ಶ್ರೇಷ್ಠ ಹಾಡುಗಾರರೆಂದು ಅರಿವಾಯಿತು. ಹಾಲುಮತ ಮಹಾ ಪುರಾಣವನ್ನು ಆತ ಹಾಡಬಲ್ಲವನಾದುದನ್ನು ತಿಳಿದುಕೊಂಡು ಸಂಗ್ರಹಕ್ಕಾಗಿ ಆಮಂತ್ರಿಸಿದರು.

ಮುಂದೆ ನಾನಾ ವಿಧದಲ್ಲಿ ನಾನಾ ಬಗೆಯಲ್ಲಿ ಕಾವ್ಯವನ್ನು ಸಂಗ್ರಹಕಾರರು ಹಾಡುಗಾರರಿಂದ ಸಂಗ್ರಹಮಾಡಿಕೊಂಡರು. ಒಂದು ದಿನಕ್ಕೆ ಒಂದು ಕ್ಯಾಸೆಟ್ಟಿನಂತೆ ನಿರಂತರವಾಗಿ ಎರಡು ತಿಂಗಳು ಹಾಡುಗಾರ ಮಹಾಕಾವ್ಯವನ್ನು ಹಾಡಿದ್ದಾನೆ. ೫೦ ನಿಮಿಷದ ೫೦ ಕ್ಯಾಸೆಟ್‌ಗಳು ಅಂದರೆ ೨೫ ಗಂಟೆಗಳಷ್ಟು ದೀರ್ಘವಾಗಿ ಹಾಡಿದ ಕಾವ್ಯವಿದು. ಪ್ರತಿಯೊಂದರಲ್ಲೂ ಸಂಗ್ರಹಕಾರರು ತುಂಬಾ ಜಾಣ್ಮೆ ವಹಿಸಿ ಕಾರ್ಯಮಾಡಿದ್ದಾರೆ.

ಹಾಲುಮತ ಮಹಾಕಾವ್ಯದ ಹಾಡುಗಾರ ಒಬ್ಬ ಬಡಕುಟುಂಬದಿಂದ ಬಂದವನಾದರು ಅವನು ಸಮಾಜದಲ್ಲಿ ಜೀವಿಸುವುದೆ ಒಂದು ದೊಡ್ಡ ಸಮಸ್ಯೆಯಾದ ಕಾಲದಲ್ಲಿ, ತನ್ನ ಕಾಯಕದ ಜೊತೆಯಲ್ಲಿ ಕಾವ್ಯ ಕಲಿತಿರುವುದು ಒಂದು ಮಾದರಿಯ ಸಂಗತಿಯಾಗಿದೆ. ಕವಿಯ ಸೌಜನ್ಯ, ಭಕ್ತಿ, ನಂಬಿಕೆ, ನಿರಂತರ ಕಾಯಕತೆ, ನಿಷ್ಪಾರ್ಥ ಸೇವೆ ಹಲವು ಗುಣಗಳಿಂದ ಆತ ಗೌರವಾನ್ವಿತನಾಗಿದ್ದಾನೆ.

ಇಂದು ಆತನಿಗೆ ವಯಸ್ಸಾದರೂ, ಕೌಟುಂಬಿಕ ಸಮಸ್ಯೆಗಳು, ಮಕ್ಕಳು ಬೇರೆಯಾಗಿ ತಾವು ಮಾತ್ರ ಒಂಟಿಯಾಗಿ ಜೀವಿಸುತ್ತಿದ್ದರೂ ತನ್ನ ತಂಡದೊಂದಿಗೆ ಈಗಲೂ ಹಾಡುತ್ತಾನೆ. ಇದು ಎಲೆಮರೆಯ ಕಾಯಿಯಂತೆ ಇದ್ದ ಕಾವ್ಯವನ್ನು ಸಂಶೋಧಕರು, ಸಂಗ್ರಹಕಾರರು ಸಂಗ್ರಹಿಸಿ ಶೋಧಿಸಿ, ಪರಿಷ್ಕರಿಸಿ ಅದನ್ನು ಲಿಖಿತ ರೂಪದಲ್ಲಿ ಜನಪದ ಸಾಹಿತ್ಯ ಲೋಕಕ್ಕೆ ಪರಿಚಯ ಮಾಡಿಕೊಟ್ಟಿದ್ದಾರೆ.

ಸಮುದಾಯವೊಂದರ ಬಗ್ಗೆ ಸುವಿಸ್ತಾರವಾಗಿ ಬಿಚ್ಚಿಕೊಳ್ಳುವ ಮಹಾಕಾವ್ಯ ಅಲ್ಲಿನ ಪ್ರತಿಯೊಂದು ಘಟನೆಗೆ ಶಿವನ ಲೀಲೆಯ ಕಾರಣೀಭೂತವಾಗಿ ನಿಂತಿದೆ. ಶಿವನಿಚ್ಛೆಯಂತೆ ಎಲ್ಲಾ ನಡೆಯುವುದೆಂದು ಭಾವಿಸಿ, ಸಮುದಾಯವೊಂದರ ಆಶಯವಾಗಿ ಮಹಾಕಾವ್ಯ ಜೀವಂತವಾಗಿದೆ.

ಹಾಲುಮತ ಮಹಾಕಾವ್ಯದ ಸೃಷ್ಟಿ ಮತ್ತು ಸಂಸ್ಕೃತಿ ಒಂದು ವಿಸ್ಮಯವಾದ ಸಮುದಾಯದ ಸಮಸ್ತ ಜೀವನಕ್ರಿಯೆಯನ್ನು ಕಾವ್ಯ ಕಟ್ಟಿಕೊಟ್ಟಿದೆ. ಅದು ಇಂದಿಗೂ ಚಾಲ್ತಿಯಲ್ಲಿದ್ದು ನಂಬಿಕೆಯ, ಪ್ರೀತಿ, ಭಕ್ತಿಯ, ಆಚರಣೆಗೆ ಸಾಕ್ಷಿಯಾಗಿ ನೆಲೆ ನಿಂತಿದೆ.

**ಅಡಿ ಟಿಪ್ಪಣಿ**

೧. ಡಾ. ವೀರಣ್ಣ ದಂಡೆ (ಸಂ.), **ಜಾನಪದ ಹಾಲುಮತ ಮಹಾಕಾವ್ಯ**, ಪು. ೮

ಜನಪದ ಸಾಹಿತ್ಯದಲ್ಲಿ 'ಹಾಲುಮತ ಮಹಾಕಾವ್ಯ'ವೊಂದು ಸಮುದಾಯದ ಸಮಸ್ತ ಚಿತ್ರಣವೊಂದನ್ನು ಕಾವ್ಯಸಂಗ್ರಹದ ಮೂಲಕ ಶಿಷ್ಟಜಗತ್ತಿಗೆ ಪರಿಚಯ ಮಾಡಿಕೊಟ್ಟಿದೆ. ಮೌಖಿಕ ಲೋಕದ ಎಲೆಮರೆಯ ಕಾಯಿಯಂತೆ ಕಾರ್ಯ ನಿರ್ವಹಿಸುತ್ತಿರುವ ಜನಪದ ಅಧ್ಯಯನದ ಸಂಶೋಧನಾತ್ಮಕ ಕಾರ್ಯಗಳು ಇಂದು ಭರದಿಂದ ಸಾಗಿವೆ. ಏಕೆಂದರೆ ಶಿಷ್ಟಸಾಹಿತ್ಯದ ಸಾರ್ವಚಾಕ್ಷುತ್ವದಲ್ಲಿ ಜನಪದ ಸಾಹಿತ್ಯ ಕರಾಳ ದಿನಗಳಲ್ಲಿದೆ. ಕತ್ತಲಿನಿಂದ ಬೆಳಕಿನಡೆಗೆ ಎಂಬಂತೆ ಜನಪದದ ಅನೇಕ ಸಗೂಢ ಜನಪದೀಯ ಅಂಶಗಳನ್ನು ಇಂದು ಜನಪದರಿಗೆ ಪರಿಚಯ ಮಾಡಿಕೊಡಬೇಕಾಗುತ್ತದೆ. ಅವುಗಳಲ್ಲಿ 'ಹಾಲುಮತ ಮಹಾಕಾವ್ಯ' ಕೂಡ ಒಂದಾಗಿದೆ.

ಮೌಖಿಕ ಕವಿಯ ಸಹೃದಯತೆ, ಅವನ ಅಗಾಧವಾದ ಶಕ್ತಿ, ಶ್ರದ್ಧೆ, ಭಕ್ತಿ, ಸುಲಲಿತವಾಗಿ ಹಾಡುವ, ಹೇಳುವ ಪರಿಜ್ಞಾನ ಇವನ್ನೆಲ್ಲ ಪರಿಗಣಿಸಿದರೆ ಆ ಕವಿಯು 'ಮಹಾಕವಿ'ಯೆಂದು ಅರಿಯಬಹುದು. ಏಕೆಂದರೆ ಮಹಾಕಾವ್ಯವನ್ನು ಒಬ್ಬನೆ ಅನಕ್ಷರಸ್ಥನಾದರೂ ಅದನ್ನು ಕಟ್ಟುವಲ್ಲಿ ಅವನ ಶ್ರಮ ಅಗಾಧವಾದುದು. ಹೀಗೆ ಸೃಷ್ಟಿಗೊಂಡ ಮೌಖಿಕ ಕಾವ್ಯವೊಂದು ಹಲವು ತಲೆಮಾರುಗಳಿಂದ ಪರಂಪರೆಯಾಗಿ ಹರಿದು ಬಂದಾಗ್ಯೂ ಸಾಂಸ್ಕೃತಿಕ ಕಾರಣಗಳಿಗಾಗಿ ಅದರ ಮೂಲ ಆಶಯ ಹಾಗೆಯೇ ಉಳಿದುಕೊಂಡು ಬಂದಿರಬಹುದಾದರೂ ಭಾಷಿಕವಾಗಿ ನಿರೂಪಣೆಯಲ್ಲಿ ಬದಲಾವಣೆಗಳಾಗಿರಬಹುದು. ಹಾಗೆಯೇ ಜನಪದ ಕವಿಯೊಬ್ಬನಿಂದ ಸೃಷ್ಟಿಗೊಂಡ ಈ ಕಾವ್ಯವನ್ನು ಅದನ್ನೊಂದು ಕಲೆಯಾಗಿ, ಧಾರ್ಮಿಕ ವಿಧಿಯಾಗಿ ಮುಂದುವರೆಸಿಕೊಂಡು ಬಂದ ಹಾಡುಗಾರರು ಪರಿಶ್ರಮ ಕೂಡ ಇಲ್ಲಿ ಸ್ತುತ್ಯಾರ್ಹವಾದುದು. ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾದ ಕಾವ್ಯದ ಹಾಡುಗಾರರು ಜೀವನದ ನಿರಂತರ ಹೋರಾಟದಲ್ಲಿ ಹಾಲುಮತದ ಕಥನಕ್ಕೆ ತನ್ನ ಅನುಭವಗಳನ್ನೂ ಧಾರೆಯೆರೆದು ಪರಿಪುಷ್ಟಿಗೊಳಿಸಿರಬಹುದಾದ ಸಾಧ್ಯತೆಯೂ ಇದೆ.

ಆಧುನಿಕ ಯುಗದ ಇಂದಿನ ಕಷ್ಟಕಾರ್ಪಣ್ಯಗಳ ದಿನಗಳಲ್ಲಿ ಪಶುಪಾಲನೆಯನ್ನು ಮೂಲವೃತ್ತಿಯನ್ನಾಗಿಸಿಕೊಂಡು ಬಂದ ಸಮುದಾಯವೊಂದು ತನ್ನ ಪುರಾತನ ಆಶಯಗಳನ್ನು, ಕನಸುಗಳನ್ನು, ಬದುಕಿನ ಅರ್ಥಪೂರ್ಣತೆಯನ್ನು ಹಾಲುಮತ ಪುರಾಣಕಾವ್ಯದ ಲಯ, ನಾದ, ರೂಪಕ, ಪ್ರತಿಮೆಗಳಲ್ಲಿ ಅರಸುವ ಮತ್ತು ಆ ಮೂಲಕ ಆಧುನಿಕತೆಯ ವಿಪತ್ಕಾರಿ ಪರಿಣಾಮಗಳಿಂದ ಬಿಡುಗಡೆ ಪಡೆದು, ವರ್ತಮಾನದ ಬದುಕಿಗೆ ಒಂದು ಆಕೃತಿಯನ್ನು ನಿರ್ಮಿಸಿಕೊಳ್ಳುವ ಪ್ರಯತ್ನವೇ ಕಾವ್ಯದ ಮುಂದುವರಿಕೆಯಾಗಿದೆಯೆಂದರೆ ತಪ್ಪಲ್ಲ. ಮೌಖಿಕ ಜಗತ್ತಿನಲ್ಲಿ ಅದರ ಅಸ್ತಿತ್ವಕ್ಕೂ ಸಹ ಇದೇ ಕಾರಣವಾಗಿರಬಹುದು.

ಮಹಾಕಾವ್ಯದ ವ್ಯಾಪ್ತಿಯಲ್ಲಿ ವಿವರಿಸಿದಂತೆ ಮಹಾ ಸಾಗರದಂತೆ ಸಮುದಾಯದ ಸ್ಮೃತಿಯಲ್ಲಿ, ಅದರ ಬೆಳವಣಿಗೆಯಲ್ಲಿ, ಸಾಮಾಜಿಕ ರಚನೆಯಲ್ಲಿ, ನಂಬಿಕೆಯ ಆಚರಣೆಗಳಲ್ಲಿ ಮಹಾಕಾವ್ಯವು ವಿವರಗಳನ್ನೊಳಗೊಂಡಿದೆ.

ಸಮಾಜಕ್ಕೆ ಕಾಯಕದ ಮಹತ್ವವನ್ನು ಈ ಕಾವ್ಯವು ತಿಳಿಸಿಕೊಡುತ್ತದೆ. ಹುಟ್ಟಿದ ಪ್ರತಿಯೊಬ್ಬರು ಏನಾದರೊಂದು ಕಾಯಕ ಮಾಡುತ್ತಲೇ ಜೀವನ ಸಾಗಿಸುತ್ತಾ ಬದುಕನ್ನು ಅರ್ಥಪೂರ್ಣವಾಗಿ ಕಟ್ಟಿಕೊಳ್ಳಬೇಕೆಂಬ ಸಂದೇಶವನ್ನು ಸಾರುತ್ತದೆ.

ಮಹಾಕಾವ್ಯದಲ್ಲಿ ಸಂಸ್ಕೃತಿಯ ಜೀವಾಳವನ್ನು ನೋಡಬಹುದು. ಅವರ ಜೀವನ, ಜೀವನ ಮಾಡುವ ಪರಿ, ಭಕ್ತಿ, ಸಾಧನೆಯ ಅಂಶಗಳು ಮುಂತಾಗಿ ಮಹಾಕಾವ್ಯದಲ್ಲಿ ಸಂಸ್ಕೃತಿಯೊಂದರ ವಿವರಗಳು, ಸ್ತ್ರೀಯರ ಜೀವನ ಚಿತ್ರಣಗಳು, ವ್ಯಾಪರ ವ್ಯವಹಾರಗಳು ಮುಂತಾದುವನ್ನು ಮಹಾಕಾವ್ಯದಲ್ಲಿ ಕಂಡುಕೊಳ್ಳಬಹುದು.

ಮಹಾಕಾವ್ಯವು ಭಕ್ತಿಯ ಪ್ರಾಮುಖ್ಯತೆಯನ್ನು ತಿಳಿಸಿಕೊಡುತ್ತಾ ಜೀವನವನ್ನು ಭಕ್ತಿಯ ವೃತ್ತಿಯಿಂದಲೆ ಸಾಗಿಸಬೇಕೆಂಬ ಆಶಯವನ್ನು ಕಾವ್ಯ ತಿಳಿಸಿಕೊಡುತ್ತದೆ.

ಹಾಲುಮತ ಮಹಾಕಾವ್ಯದಲ್ಲಿ ಮಾಂತ್ರಿಕ ಪವಾಡಗಳಿಂದ ಅಸಾಮಾನ್ಯ ಸಂಗತಿಗಳನ್ನು ದೇವರ ಲೀಲೆಗಳನ್ನು ಪವಾಡಗಳನ್ನು ಕಾಣಬಹದು.

೧. ಜೀವನದ ಮೌಲ್ಯಗಳನ್ನು ನೀಡಿದೆ.

೨. ಜೀವನದ ಅನಂತ ಕಾಯಕ ವೃತ್ತಿಗಳನ್ನು ಪರಿಚಯ ಮಾಡಿಕೊಟ್ಟಿದೆ.

೩. ಸಮುದಾಯದ ಸೃಷ್ಟಿಯ ರೂಪವನ್ನು ತೋರಿಸಿಕೊಟ್ಟಿದೆ.

೪. ಸಮುದಾಯದ ಸೃಷ್ಟಿಯ ಹಿನ್ನೆಲೆಯನ್ನು ತಿಳಿಸಿದೆ.

೫. ಸಮುದಾಯದಲ್ಲಿ ದೇವರ ಲೀಲೆಗಳು ಪವಾಡಗಳನ್ನು ಆತನ ವಿಸ್ಮಯ ರೂಪವನ್ನು ಕಾವ್ಯದಲ್ಲಿ ಕಾಣಬಹುದು.

೬. ಕಾವ್ಯವು ಸಾಮಾಜಿಕ ಸ್ಥಿತಿಗತಿಗಳನ್ನು ಬಿಂಬಿಸುತ್ತದೆ.

೭. ಅನೇಕ ಪವಾಡಗಳು, ವಿಸ್ಮಯ ಘಟನೆಗಳು ಅಸಾಮಾನ್ಯ ವಿಷಯಗಳ ಮೂಲಕ ಸಮುದಾಯವೊಂದರ ಸಾಂಸ್ಕೃತಿಕ ಚಿತ್ರಣವನ್ನು ಕಾವ್ಯವು ನೀಡುತ್ತದೆ.

೮. ಕಾಯಕದ ಮಹತ್ವವನ್ನು ಕಾವ್ಯವವು ಸಾರುತ್ತದೆ. ಸಮುದಾಯದ ಒಳಿತಿಗಾಗಿ ಮಾನವ ದೇವರಾಗುವ ಪರಿಯನ್ನು ಕಾವ್ಯವು ನಿರೂಪಿಸುತ್ತದೆ.

೯. ಸ್ವತಃ ಕವಿಯ ಜೀವನ ಚಿತ್ರಣವನ್ನು, ಸಾಧನೆಯನ್ನು ದೃಷ್ಟಿಕೋನವನ್ನು ಕಾವ್ಯದಲ್ಲಿ ನೋಡಬಹುದು.

೧೦. ಹೀಗೆ ನೂರಾರು ಅಂಶಗಳು ಕಾವ್ಯಾಧ್ಯಯನದ ಫಲಿತಗಳಾಗಿ ಹೊರಬಂದಿರುವುದು ಗಮನಾರ್ಹ. ಮೌಖಿಕ ಮಹಾಕಾವ್ಯವಾದ ಹಾಲುಮತ ಮಹಾಕಾವ್ಯದಿಂದ ಜೀವನ ಮೌಲ್ಯಗಳನ್ನು ತಿಳಿಯಬಹುದಾಗಿದೆ. ಜೀವನದಲ್ಲಿ ಅವುಗಳನ್ನು ಅನುಸರಿಸಿಕೊಂಡು ಅದರಂತೆ ನಡೆಯಬಹುದಾಗಿದೆ. ಮಹಾಕಾವ್ಯದಲ್ಲಿ ಭಕ್ತಿ, ಕಾಯಕ, ಆಚರಣೆ, ಸಂಪ್ರದಾಯ ಮುಂತಾದವುಗಳ ಎಳೆಗಳನ್ನು ಕಾಣಬಹುದಾಗಿದೆ.

ಹಾಲುಮತ ಮಹಾಕಾವ್ಯದಲ್ಲಿ ವಸ್ತುನಿಷ್ಠತೆಗೆ ಇರುವ ಮಹತ್ವ ವ್ಯಕ್ತಿನಿಷ್ಠಕ್ಕೆ ಇಲ್ಲ. ಅದು ಯಾವ ವ್ಯಕ್ತಿಯನ್ನೂ ಹೊಗಳಿಲ್ಲ, ತೆಗಳಿಲ್ಲ. ಆದರ್ಶಗಳನ್ನು ಎತ್ತಿಹಿಡಿದಿದೆ. ಸಾಮಾಜಿಕ ಬದಲಾವಣೆಯಲ್ಲಿ ಕಾವ್ಯ ಯಶಸ್ವಿಯಾಗಿದೆ. ಅದರಲ್ಲೂ ಶಿವನ ಲೀಲಾಚೇತನಗಳು ಹೇರಳವಾಗಿವೆ. ದೈವಾಂಶದಿಂದ ಕಾವ್ಯಕೂಡಿಕೊಂಡಿದೆ.

ಮೌಖಿಕ ಸಾಮ್ರಾಜ್ಯದ ಅಧಿಪತಿಯಾಗಿ ಮೆರೆದಿರುವ ಕವಿ ಇಲ್ಲಿ ಸಾಮಾನ್ಯ ವರ್ಗದ ಒಬ್ಬ ವ್ಯಕ್ತಿ. ಅವನಿಗೆ ನಾನೊಬ್ಬ ಕವಿಯೆಂಬ ಅಹಂಕಾರವಿಲ್ಲ. ದುರಾಸೆಯಿಲ್ಲ. ಅಲ್ಲದೆ ಆತನೊಬ್ಬ ಅನಕ್ಷರಸ್ಥ ಆದರೂ ನಿರೂಪಣೆಯಲ್ಲಿನ ಆತನ ನಿರರ್ಗಳತೆ, ಕಥನವನ್ನು ಅಧ್ಬುತವಾಗಿ ಕಟ್ಟಿಕೊಡುವ ಪ್ರತಿಭೆ, ಭಕ್ತಿಯ ಪಾರಮ್ಯತೆ ಎದ್ದುಕಾಣುತ್ತದೆ.

ಮಹಾಕಾವ್ಯದಲ್ಲಿ ಕಥೆಯ ಹಂದರಗಳು ಒಂದು ಚೌಕಟ್ಟಿನಲ್ಲಿ ತುಂಬಿಕೊಂಡಿವೆ. ಕಥೆಯು ಭಾಗಶಃ ಒಂದು ವ್ಯವಸ್ಥಿತ ಹಾದಿಯಲ್ಲಿ ವೇಗವಾಗಿ ಸಾಗುತ್ತದೆ. ಕುತೂಹಲ ಕೇಳುಗನನ್ನು ಹಿಡಿದಿಡುತ್ತದೆ.

ಮಹಾಕಾವ್ಯದಲ್ಲಿ ಶಿವಪಾರ್ವತಿಯರ ಲೀಲಾವಿಲಾಸವನ್ನು ಕಾಣಬಹುದಾಗಿದೆ. ಅಲ್ಲದೆ ಸೃಷ್ಟಿಕರ್ತನೆ ಶಿವನಾಗಿದ್ದಾನೆ. ಅವನ ಸೃಷ್ಟಿಯಂತೆ ಕಾವ್ಯದಲ್ಲಿ ಅನೇಕ ಪಾತ್ರಗಳು ತುಂಬಿವೆ. ಆತನ ಭಕ್ತಿಯಿಂದ ಅನೇಕ ಪವಾಡಪುರುಷರಾಗಿ ಸಮುದಾಯದಲ್ಲಿ ದೇವರಾಗಿ ನೆಲೆಯಾಗಿದ್ದಾರೆ.

ಮಹಾಕಾವ್ಯದಲ್ಲಿ ಭೂಮಂಡಲ ಸೃಷ್ಟಿಯಾದ ಬಗೆ ಮತ್ತು ದೇವತೆಗಳಪಾತ್ರ, ಅವರ ಆಶೋತ್ತರಗಳು ಮುಂತಾದವು ರಮ್ಯವಾಗಿ ಮೂಡಿಬಂದಿವೆ. ದೇವರ ಸೃಷ್ಟಿಯಂತೆ ಕಾವ್ಯದಲ್ಲಿ ಪ್ರತಿಯೊಂದು ಭಾಗವು ಭಕ್ತಿಯಿಂದ ಪ್ರತಿಫಲಿಸದೆ, ಮಹಾಕಾವ್ಯದಲ್ಲಿ ಸಮುದಾಯದ ಸಮಸ್ತ ಚಿತ್ರಣ ನೋಡಬಹುದಾಗಿದೆ.

ಮಹಾಕಾವ್ಯದಲ್ಲಿ ಪ್ರಥಮಭಾಗದಲ್ಲಿ ರಾಕ್ಷಸರ ಸಂಹಾರ ನಂತರ ಅವರನ್ನು ಕುರಿಗಳನ್ನಾಗಿ ಮಾಡಿ ದೇವತೆಗಳು ರಕ್ಷಿಸುವುದು, ನಂತರ ಪಾರ್ವತಿದೇವಿ ತನ್ನ ಶಕ್ತಿಯಿಂದ ಮಾನವ ಜೋಡಿಯನ್ನು ಸೃಷ್ಟಿಸಿ ಅವುಗಳನ್ನು ಸಾಕುವುದಕ್ಕೆ ಬಿಡುವುದು ಅದನ್ನೆ ಅವರ ಕಾಯಕವನ್ನಾಗಿ ಮಾಡುವುದು ಮಹತ್ತರ ಸಂಗತಿಯಾಗಿದೆ. ಏಕೆಂದರೆ ಇಲ್ಲಿ ಅಹಿಂಸೆಯ ಅಂಶ ಕಾಣಬಹುದಾಗಿದೆ. ರಾಕ್ಷಸರನ್ನು ಸಂಹಾರ ಮಾಡುತ್ತ ಅವರ ಪಾಪ ಕರ್ಮ ಕಳೆಯುವುದಕ್ಕಾಗಿ ಅವರನ್ನು ಕುರಿಗಳನ್ನಾಗಿ ಮಾಡುವುದರಿಂದ ಈ ಅಂಶ ಸ್ಪಷ್ಟವಾಗುತ್ತದೆ.

ಈ ಕಾವ್ಯದಲ್ಲಿ ಬೀರಪ್ಪನ ಜನ್ಮವೃತ್ತಾಂತವು ನಿಗೂಢ ಸಂಗತಿಯಾಗಿ ಚಿತ್ರಿತಗೊಂಡಿದೆ. ಅದು ದೇವರ ಅಂಶದಿಂದ ಸೃಷ್ಟಿಗೊಂಡಿದೆ. ನಂತರದಲ್ಲಿ ಬೀರಪ್ಪನ ಲೀಲಾವಿಲಾಸವು ಅತ್ಯಂತ ರೋಮಾಂಚನಕಾರಿಯಾಗಿ ಮೂಡಿಬಂದಿದೆ. ಅಸಾಮಾನ್ಯ ಕಾರ್ಯಗಳನ್ನು ವಯಸ್ಸಿಗೆ ಮೀರಿದ ಕೆಲಸಗಳನ್ನು ಬೀರಪ್ಪನು ತನ್ನ ಬಾಲ್ಯದಲ್ಲಿ ಮಾಡುವನು. ಇದರಿಂದ ಸಮಾಜದ ಜನರಲ್ಲಿ ಆತನನ್ನು ಪವಾಡಪುರುಷನನ್ನಾಗಿಸಿತು.

ಬೀರಪ್ಪನ ಸಾಹಸಗಳು ರೋಚಕವಾಗಿವೆ. ಆತನು ಆಡದ ಆಟವಿಲ್ಲ. ಮಾಡದ ಕಾಯಕವಿಲ್ಲ. ಆತನಿಗೆ ಅಸಾಧ್ಯವಾದುದು ಯಾವುದು ಇಲ್ಲ. ಆತನನ್ನು ಸೋಲಿಸದವರು ಯಾರೂ ಇಲ್ಲ. ಸೋಲದ ಸರದಾರನಾಗಿ ಬೀರಪ್ಪನು ಮಿಂಚುತ್ತಾನೆ. ಅಲ್ಲದೆ ಅಸಹಾಯಕ ಜನರಿಗೆ ನ್ಯಾಯ ದೊರಕಿಸಿ ಕೊಡುವಲ್ಲಿ ಬೀರಪ್ಪನು ಜೀವ ಪಣಕ್ಕಿಡುತ್ತಾನೆ. ಬಡವರಿಗಾಗಿ ಬೀರಪ್ಪನಿದ್ದಾನೆ ಎಂಬಂತೆ ಅವರಿಗಾಗಿ ಬಾಳುತ್ತಾನೆ. ಈತನು ದೈವ ಪವಾಡ ಪುರುಷನಾಗಿ ಮಹಾಕಾವ್ಯದಲ್ಲಿ ಮೆರೆದಿದ್ದಾನೆ.

ಮಾಳಿಂಗರಾಯನು ಬೀರಪ್ಪನು ಪ್ರಾಣ ಶಿಷ್ಯನಾಗಿ ಕಾವ್ಯದಲ್ಲಿ ಮಿಂಚಿದ್ದಾನೆ. ಎಷ್ಟೇ ಸಂದಿಗ್ಧ ಸನ್ನಿವೇಶ ಸೃಷ್ಟಿಯಾದರೂ ಗುರುವೇ ಜೀವವೆಂಬಂತೆ ಮಾಳಿಂಗರಾಯ ಗುರುಸೇವೆಯಲ್ಲಿ ತನ್ನನ್ನು ಸಮರ್ಪಿಸಿಕೊಂಡಿದ್ದಾನೆ.

ಶಿಷ್ಯನ ಭಕ್ತಿ ನಿಷ್ಠೆಗೆ ಗುರು ಬೀರಪ್ಪನೇ ಸೋತು ಶಿಷ್ಯನನ್ನು ಪ್ರಾಣಕ್ಕಿಂತ ಹೆಚ್ಚಾಗಿ ನೋಡಿಕೊಳ್ಳುತ್ತಾನೆ. ನಂಬಿಕೆ, ಸಹನೆ, ಪ್ರೀತಿ, ವಿಶ್ವಾಸ, ಎಲ್ಲಾ ಇವರಿಬ್ಬರಲ್ಲಿ ನೋಡಬಹುದು.

ಬೀರಪ್ಪನು ಸಮುದಾಯಕ್ಕೆ ಅನೇಕ ರೀತಿಯಿಂದಲೂ ಸೇವೆ ಸಲ್ಲಿಸುವಲ್ಲಿ ದೇವರಾಗಿ ಕಂಡಿದ್ದಾನೆ. ಸಮುದಾಯದ ದೇವರು ಬೀರಪ್ಪನಾಗಿದ್ದಾನೆ. ಆತನಲ್ಲಿ ಪ್ರತಿಯೊಂದು ಸಂಕಷ್ಟಗಳನ್ನು ಸಮುದಾಯದವರು ಬಗೆಹರಿಸಿಕೊಂಡಿದ್ದಾರೆ. ಸುಖ-ಶಾಂತಿಯಿಂದ ಸಿರಿ-ಸಂಪತ್ತಿನಿಂದ ಸಂಭ್ರಮದಲ್ಲಿ ಜನ ಜೀವಿಸಿದ್ದಾರೆ. ಹಾಗಾಗಿ ಬೀರಪ್ಪನು ಜನರ ಮೆಚ್ಚಿನ ಹೃದಯ ಗೆದ್ದು ದೇವರಾಗಿದ್ದಾನೆ.

ಮಹಾಕಾವ್ಯದಲ್ಲಿ ಉನ್ನತ ಮೌಲ್ಯಗಳನ್ನು ಕಾಣಬಹುದಾಗಿದೆ. ಸಮುದಾಯದ ಜೀವನ ಪ್ರಕ್ರಿಯೆ ಕಾಣಬಹುದಾಗಿದೆ. ಸಂಕಷ್ಟ, ಪ್ರೀತಿ, ವಿಶ್ವಾಸ, ರೋಮಾಂಚನ, ಸಂಭ್ರಮ, ದುಃಖ-ಸುಖ ಎಲ್ಲಾ ನೋಡಬಹುದಾಗಿದೆ.

ಒಟ್ಟಾರೆಯಾಗಿ ಸಮುದಾಯದ ದಾರಿದೀಪವಾಗಿ ಹಾಲುಮತ ಮಹಾಕಾವ್ಯವು ರೂಪುಗೊಂಡಿದೆ.

ಮೌಖಿಕ ಪರಂಪರೆಯ ಸಂಸ್ಕೃತಿಯನ್ನು, ಸಂಸ್ಕೃತಿಯ ಜೀವಾಳವನ್ನು ಜಾನಪದ ಸಾಹಿತ್ಯದ ಪ್ರಕಾರಗಳಲ್ಲಿ ನೋಡಬಹುದಾಗಿದೆ. ಸಂಸ್ಕೃತಿಯ ನಿಜ ಸೌಂದರ್ಯವನ್ನು ಮೌಖಿಕ ಸಂಪ್ರದಾಯಗಳಲ್ಲಿ ಜೀವಂತವಾಗಿ ಕಾಣಬಹುದಾಗಿದೆ. ವಿಶಿಷ್ಟ ಸೃಜನಾತ್ಮಕ ಪರಂಪರೆಯಲ್ಲಿ ಮೌಖಿಕ ಕಲೆಯು ಶ್ರೀಮಂತಿಕೆಯಿಂದ ಕೂಡಿದೆ.

ಗೆಲುವಿನ ಕುದುರೆಯನ್ನು ಹತ್ತಿಹೊರಟಿರುವ ಇಂದಿನ ಮಾನವ ತನ್ನೆಲ್ಲಾ ಸಂಸ್ಕೃತಿಯನ್ನು ಕೈಬಿಟ್ಟು, ಸರಳವಾದ, ಅಸಂಪ್ರದಾಯಬದ್ಧವಾದ, ಕ್ಷಣಿಕ ಸಂಸ್ಕೃತಿಗೆ ಸೋತು, ಅದನ್ನು ಇತಿಹಾಸ ಪುಟದಲ್ಲಿ ಸೇರಿಸಿದ್ದಾನೆ. ಸೇರಿಸಿದರು. ನಮ್ಮ ಸಂಸ್ಕೃತಿಯು ಚಿರನೂತನವಾದುದು. ಅದು ತನ್ನ ವೈಭವತೆಯನ್ನು ನಿರಂತರವಾಗಿ ಸಾರುತ್ತಾ ನಿಗೂಢತೆಯನ್ನು ಬಿಚ್ಚಿಡುತ್ತಾ ಸಾಗಿದೆ. ಸಂಸ್ಕೃತಿಯ ಜೀವಾಳವೇ 'ಜನಪದ ಜೀವನ ಶೈಲಿ'. ಅದರಲ್ಲಿನ ನೂರೆಂಟು ಸಂಪ್ರದಾಯಗಳು ಸಂಸ್ಕೃತಿಯನ್ನು ಬಿಂಬಿಸುತ್ತವೆ. ಅಂತಹ ಸಂಸ್ಕೃತಿಯ ಬಿಂಬಿಸುವಿಕೆಯಲ್ಲಿ 'ಮೌಖಿಕ ಸಾಹಿತ್ಯ'ದ ಕಾಯಕವು ಅಸಾಮಾನ್ಯವಾದುದಾಗಿದೆ.

ಮೌಖಿಕ ಸಾಹಿತ್ಯದಲ್ಲಿ ಅನೇಕ ಪ್ರಕಾರಗಳಿವೆ. ಅಂತಹ ಪ್ರಕಾರಗಳೆಲ್ಲವು ಜನಪದರ ಜೀವನ ಸಂಪ್ರದಾಯವನ್ನು ಬಿಂಬಿಸುತ್ತವೆ. ಅವುಗಳಲ್ಲಿ ಪ್ರಮುಖವಾದುದು 'ಮಹಾಕಾವ್ಯ', ಇಂದು ಮಹಾಕಾವ್ಯವು ಜನರ ಹೃದಯಗಳಲ್ಲಿ ನೂರೆಂಟು ಸಂಸ್ಕೃತಿಯ ಶ್ರೀಮಂತಿಕೆಯನ್ನು ಬಿಂಬಿಸುತ್ತವೆ. ಏಕೆಂದರೆ ಜನಪದರೆ ಇವುಗಳ ಯಜಮಾನರು. ಸೃಷ್ಟಿಕರ್ತರು.

ಮಹಾಕಾವ್ಯಗಳಲ್ಲಿ ಪ್ರಮುಖವಾದ, ದೀರ್ಘವಾದ, ಸಮುದಾಯದ ಚಿತ್ರಣವನ್ನು ಆದಿಯಿಂದ, ಅಂತ್ಯದವರೆಗೆ ಪ್ರತಿಬಿಂಬಿಸುವ ಮಹಾಕಾವ್ಯ 'ಹಾಲುಮತ ಮಹಾಕಾವ್ಯ'. ಇದು 'ಹಾಲುಮತ' ಸಮುದಾಯದ ಬಗ್ಗೆ ಸಂಪೂರ್ಣ ಚಿತ್ರಣ ನೀಡುವಂತ ಮಹಾಕಾವ್ಯವಾಗಿದೆ. ಶಿವ-ಪಾರ್ವತಿಯರ ಲೀಲಾ ವಿಲಾಸಗಳಿಂದ ಕೂಡಿದ ಚೇತನಾತ್ಮಕವಾದ ಮಹಾಕಾವ್ಯವಾಗಿದೆ.

ಜನಪದ ಹಾಲುಮತ ಮಹಾಕಾವ್ಯವು ಅತ್ಯಂತ ದೀರ್ಘವಾದ, ಕತೆಯ ಹಂದರಗಳನ್ನು ಹೊಂದಿರುವಂತದ್ದು. ಅಲ್ಲದೆ ಕಾಯಕದ ಮಹತ್ವ, ಭಕ್ತಿ, ಪೂಜೆ, ಸ್ಫೂರ್ತಿ, ಜೀವನ, ನಂಬಿಕೆ, ಸರಳತೆ ಮುಂತಾದ ಅಂಶಗಳನ್ನು ಕಾವ್ಯ ಕಟ್ಟಿಕೊಂಡು ಸಾಗಿದೆ.

ಮಹಾಕಾವ್ಯವು ಒಂದು ಸಮುದಾಯದ ಸಮಸ್ತ ಚಿತ್ರಣವನ್ನು ಬಿಂಬಿಸಿದೆ. ಇದೊಂದು ಮೌಖಿಕ ಸಂಪ್ರದಾಯ ಆಚಾರಗಳ ಬಿಂಬವನ್ನು ಪ್ರತಿಬಿಂಬಿಸಿದೆ. ಇದನ್ನು ಕಲೆಹಾಕಿ ಸಂಪಾದಿಸಿದವರು ಡಾ. ವೀರಣ್ಣ ದಂಡಿಯವರು. ಇದೊಂದು ಬೃಹತ್ ಮೌಖಿಕ ಮಹಾಕಾವ್ಯ. ಇದನ್ನು ಒಬ್ಬನೆ ಜನಪದ ಗಾಯಕ ತನ್ನ ಹೃದಯ ಶ್ರೀಮಂತಿಕೆಯಿಂದ ನಿರಂತರವಾಗಿ ಹಾಡುವ ಮಹಾಭಕ್ತ. ಇವರಿಂದ ಸಂಪಾದಕರು ಮಹಾಕಾವ್ಯವನ್ನು ಪಡೆದುಕೊಂಡಿದ್ದಾರೆ. ಜನಪದರ ಹೃದಯಗಳಲ್ಲಿ ಮಹಾಕಾವ್ಯವು ಇಂದಿಗೂ ಜೀವಂತವಾಗಿದೆ. ಏಕೆಂದರೆ ಇದು ಜನಪದರ ಜೀವನ ಪ್ರತಿಬಿಂಬಿಸುವ ಮಹಾಕಾವ್ಯವಾಗಿದೆ. ಅಲ್ಲದೆ ಜನಪದರ ನಂಬಿಕೆಯನ್ನು, ದೃಢತೆಯನ್ನು ಸಾರುತ್ತದೆ.

ಸಮುದಾಯದ ಸೃಷ್ಟಿ ಮತ್ತು ಸಂಸ್ಕೃತಿಯನ್ನು ಮಹಾಕಾವ್ಯ ತಿಳಿಸುತ್ತದೆ. ಶಿವಪಾರ್ವತಿಯರು ತಮ್ಮ ಲೀಲಾ ವಿಲಾಸಗಳಿಂದ ಆಕಸ್ಮಿಕವಾಗಿ ಪಾರ್ವತಿ ಮೈಮರೆತಾಗ ಅವಳ ಎದೆಹಾಲು ಭೂ ಮಣ್ಣಿಗೆ ತಾಗಿ ಅವುಗಳಿಂದ ಮೋಹಕಗೊಂಡ ಪಾರ್ವತಿ ಆ ಮಣ್ಣಿನಿಂದ ಬೊಂಬೆ ಮಾಡಿ ಶಿವನಿಂದ ಪ್ರಾಣ ಬಿಕ್ಷೆ ನೀಡಿ ಸಮುದಾಯದ ಸೃಷ್ಟಿಗೆ ಅದಿ ದೇವತೆಯಾಗುತ್ತಾಳೆ. ಅವರನ್ನು ಪೊರೆದು, ಸಾಕಿ, ಬೆಳೆಸಿ, ಕಾಯಕಕ್ಕೆ ಅನುವಾಗುವಂತೆ ಅಣಿಗೊಳಿಸಿದ್ದನ್ನು ಮಹಾಕಾವ್ಯದ ಆರಂಭದಲ್ಲಿ ಗಮನಿಸಬಹುದಾಗಿದೆ. ಹೀಗೆ ಮಹಾಕಾವ್ಯವು ಸಾಗಿಬರುತ್ತದೆ.

ಹಾಲು ಮತ ಮಹಾಕಾವ್ಯವು ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತವಿರುವ ಮೌಖಿಕ ಸಾಹಿತ್ಯ. ಸಮುದಾಯದ ಸೃಷ್ಠಿ, ಅದರ ಸಂಸ್ಕೃತಿಯನ್ನು ಬಿಂಬಿಸುವುದು ಕಾವ್ಯದ ಮಹತ್ತರ ಸಂಗತಿಯಾಗಿದೆ. ಭಕ್ತಿಯ ಪಾರದರ್ಶಕತೆಯು ಕಾವ್ಯದಲ್ಲಿ ಹೇರಳವಾಗಿದೆ. ಸಮುದಾಯದ ಸಮಗ್ರ ಚಿತ್ರಣ ಕಾವ್ಯದಲ್ಲಿ ರೂಪುಗೊಂಡಿದೆ. ಕಾವ್ಯವು ಅನೇಕ ವೃತ್ತಾಂತಗಳಿಂದ ಕೂಡಿದ್ದು ಅವುಗಳನ್ನು ಮೌಖಿಕ ಕಂಠಸ್ಥ ಸಂಪ್ರದಾಯಗಳಲ್ಲಿ ರಾಗವಾಗಿ ಹಾಡಬಹುದಾಗಿದೆ. ಹಾಲುಮತಸ್ಥರ ಜೀವನದ ನಾನಾ ಮುಖಗಳನ್ನು ಮಹಾಕಾವ್ಯವು ಪ್ರತಿಬಿಂಬಿಸಿದೆ. ಹಾಲುಮತಸ್ಥರ ಸೃಷ್ಠಿ, ಅವರ ಸಂಸ್ಕೃತಿ, ಜೀವನ ವಿಧಾನಗಳು, ನಂಬಿಕೆಗಳು, ಸಂಪ್ರದಾಯಗಳು, ಭಕ್ತಿ, ಕಾಯಕತತ್ವ, ಪರಂಪರೆ ಅವರ ಜೀವನ ಕ್ರಮ, ಸಾಮಾಜಿಕ ಚಿತ್ರಣ, ಮುಂತಾದ ಅನೇಕ ವಿಷಯಗಳನ್ನು ಜನಪದ ಹಾಲುಮತ ಮಹಾಕಾವ್ಯವು ಪ್ರಸ್ತಾಪಿಸಿದೆ.

ಸಮುದಾಯದ ಉಳಿವಿಗಾಗಿ ಸ್ವಾರ್ಥರಹಿತ ಹೋರಾಟಮಾಡಿದ ತ್ಯಾಗ ಬಲಿದಾನದ ವೀರನ ಜೀವನವನ್ನು ಇದು ಅನಾವರಣಗೊಳಿಸಿದೆ. ಅಲ್ಲದೆ, ಆ ವೀರನು ದೈವಾಂಶ ಸಂಭೂತನೆಂದು ಸಮುದಾಯದವರು ಆತನನ್ನು ದೇವರನ್ನಾಗಿ ಭಕ್ತಿಯಿಂದ ಪೂಜೆ ಮಾಡುವುದು ಮಹಾಕಾವ್ಯದಲ್ಲಿ ಗಮನಿಸಬಹುದಾಗಿದೆ. ಶಿಷ್ಯನ ನಿಸ್ವಾರ್ಥ ಸೇವೆ ಆತನ ಮೌಲ್ಯಿಕ ವಿಚಾರಗಳು ಜೀವನದ ವಿಧಾನಗಳು ಮಹಾಕಾವ್ಯವು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದೆ.

ಮಹಾಕಾವ್ಯದಲ್ಲಿ ಸಮುದಾಯದ ಜನಸಾಮಾನ್ಯರ ನಾನಾ ಮುಖಗಳನ್ನು ಕಾಣಬಹುದು. ಅವರಲ್ಲಿ ಮೌಢ್ಯತೆಯನ್ನು ತೆಗೆದು ಅವರ ಜೀವನದಲ್ಲಿ ಬೆಳಕು ಮೂಡಿಸುವಲ್ಲಿ ಮಹಾಕಾವ್ಯವು ಯಶಸ್ವಿಯಾಗಿದೆ. ಸಮುದಾಯದ ಇತಿಹಾಸದ ಪರಂಪರೆ, ಮೂಲದ ನಂಬಿಕೆಗಳು ಮತ್ತು ವಿಚಾರಧಾರೆಯ ಸಂಪ್ರದಾಯವನ್ನು ಸಮುದಾಯಕ್ಕೆ ಮಹಾಕಾವ್ಯವು ಒದಗಿಸಿದೆ. ಸಮುದಾಯಕ್ಕಾಗಿ ಹೋರಾಡಿದ ವೀರರ ಜೀವನದ ಅಸಾಮಾನ್ಯ ಕೃತ್ಯಗಳು, ಅತಿಮಾನುಷ ಪಾತ್ರಗಳ ಹೋರಾಟ, ಗತಕಾಲದ ಅನೇಕ ಘಟನೆಗಳನ್ನು ಮಹಾಕಾವ್ಯವು ಜನಪದರ ಸಮೂಹಕ್ಕೂ, ಸಮುದಾಯಕ್ಕೂ, ಶ್ರೀಮಂತಿಕೆಯಿಂದ ನೀಡಿದೆ. ಸಮುದಾಯದ ಉಳಿವಿಗಾಗಿ, ಸಂಸ್ಕೃತಿಯನ್ನು ಕಾಪಾಡಲು ಸಮುದಾಯದ ವೀರನ ಹೋರಾಟ ಸಂದಿಗ್ಧ, ಸಮಸ್ಯೆಗಳು, ಪ್ರೀತಿ, ಕೆಚ್ಚು, ದೈವಿಕ ಶಕ್ತಿಗಳ ಕೊಡುಗೆ ಮುಂತಾದ ಅಂಶಗಳು ಮಹಾಕಾವ್ಯವನ್ನು ರೂಪಿಸುವಲ್ಲಿ ಕೆಲಸ ಮಾಡಿವೆ.

ಸಮುದಾಯಕ್ಕೆ ಮಹಾಕಾವ್ಯವು 'ಮಾನವೀಯ ಗುಣ'ಗಳನ್ನು ನೀಡಿದೆ. ವಾಸ್ತವತೆಯ ಅರಿವು ಮೂಡಿಸಿದೆ. ಸಂಸ್ಕೃತಿಯ ಮಹತ್ವ ತಿಳಿಸಿದೆ. ಅಲ್ಲದೆ ಸಾವಿರಾರು ಸೃಜನಾತ್ಮಕ ಸಂಗತಿಗಳನ್ನು ಮಹಾಕಾವ್ಯವು ಸಮುದಾಯಕ್ಕೆ ಮಾದರಿಯಾಗಿ ಮಾರ್ಗದರ್ಶಿಯಾಗಿದೆ. ಅಲ್ಲದೆ ಗತಕಾಲದ ಲೋಕದೃಷ್ಟಿಯನ್ನು ತಿಳಿಸಿದೆ. ಹಾಲುಮತ ಸಮುದಾಯದ ಜೀವನಕ್ರಮವನ್ನು ರೂಪಿಸಿದೆ.

ಹಾಲುಮತ ಮಹಾಕಾವ್ಯದ ಕಥೆಯಲ್ಲಿ ದೇವರುಗಳ ಪವಾಡಗಳು ಅದರಿಂದ ಮಾನವ ಕುಲ ಬೆಳವಣಿಗೆ, ಕಾಯಕ ತತ್ವದ ಅರಿವು, ಜನರಲ್ಲಿನ ಮೋಹಕತೆ, ಕ್ರೌರ್ಯತೆಯ ಬಗ್ಗೆ ಹಾಗೂ ಪಾಪಪ್ರಜ್ಞೆಯ ಭೀತಿ ಮುಂತಾದವು ಮಹಾಕಾವ್ಯದ ಕಥೆಯಲ್ಲಿ ಗಮನಿಸಬಹುದಾಗಿದೆ. ಅಲ್ಲದೆ ಹಾಲುಮತ ಸಮುದಾಯ ಬೆಳೆದು ಬಂದ ಅನೇಕ ಹಂದರಗಳನ್ನು ಕಾವ್ಯ ಕಟ್ಟಿಕೊಟ್ಟಿದೆ.

ಹಾಲುಮತ ಮಹಾಕಾವ್ಯದಲ್ಲಿ ಕಥೆಯು ಕೈಲಾಸದ ಹಾಡಿಕೆಯಿಂದ ಪ್ರಾರಂಭವಾಗಿ ಅನೇಕ ಶರಣರ ವೃತ್ತಾಂತಗಳು ಇಲ್ಲಿಯ ತನಕ ಮಹಾಕಾವ್ಯ ವ್ಯಾಪಿಸಿಕೊಂಡು ಕಥೆಯ ಅನೇಕ ಮಜಲುಗಳನ್ನು ಒಳಗೊಂಡಿದೆ. ಅವುಗಳಲ್ಲಿ ಪ್ರಮುಖವಾಗಿ ಬ್ರಹ್ಮಾಂಡ ಸೃಷ್ಟಿ, ದೇವರುಗಳ ಉಗಮ, ರಾಕ್ಷಸರ ಸಂಹಾರ, ಹೀಗೆ ಅನೇಕ ಘಟನೆಗಳ ಸರಮಾಲೆಯು ಕೈಲಾಸದ ಹಾಡಿಕೆಯಲ್ಲಿ ಬರುತ್ತದೆ. ತದನಂತರದಲ್ಲಿ ಹಾಲುಮತಸ್ಥರ ಪೂರ್ವಜರ ಬಗ್ಗೆ ಅವರು ದೈವಾಂಶ ಸಂಭೂತರು, ಪಾರ್ವತಿ, ಪರಶಿವನ ಪ್ರಸಾದಿಂದ ಉದ್ಭವಿಸಿದವರು, ಅವರಿಗೆ ಶಿವನು ನಾನಾ ಸಂಕಷ್ಟಗಳನ್ನು ಕೊಟ್ಟರೂ ಸಮಾಜದಲ್ಲಿ ಅವರು ತಮ್ಮ ಸ್ಥಾನಮಾನಗಳನ್ನು ಪಡೆಯುವಲ್ಲಿ ಯಶಸ್ವಿಯಾಗುತ್ತಾರೆ. ನಂತರದಲ್ಲಿ ಶಿವನ ಪ್ರತಿರೂಪವಾದ 'ಬೀರಪ್ಪನ ವೃತ್ತಾಂತ' ಬರುತ್ತದೆ. ದೈವಾಂಶ ಪವಾಡಗಳಿಂದ ತುಂಬಿರುವ ಈ ವೃತ್ತಾಂತದಲ್ಲಿ ಬೀರಪ್ಪನ ಬಾಲ್ಯ ಜೀವನದ ಘಟನೆಗಳು ಬಹಳ ರೋಚಕವಾಗಿವೆ. ವೀರತ್ವ, ಹಾಸ್ಯ, ನಿಸ್ವಾರ್ಥತೆ, ದೃಢಸಂಕಲ್ಪ, ಗುರಿ, ಮುಂತಾದ ಅನೇಕ ಉತ್ತಮಾಂಶಗಳು ಅದರಲ್ಲಿ ನೋಡಬಹುದಾಗಿದೆ. ಅಲ್ಲದೆ ಇಲ್ಲಿ ಶಿವನ ಪವಾಡಗಳು ಕೂಡ ಕಾಣದೆ ಕಾರ್ಯಗತವಾಗಿರುತ್ತವೆ. ನಂತರದಲ್ಲಿ

ಬೀರಪ್ಪನ ಅಕ್ಕಂದಿರಾದ 'ಅಕ್ಕವ್ವ ಮಾಯವ್ವ'ರ ವೃತ್ತಾಂತ ಬುರತ್ತದೆ. ಇಲ್ಲಿ ಸಹನೆ, ಪ್ರೀತಿ, ಬಾಲ್ಯಜೀವನದ ಆಟ, ಕಾಯಕ, ಅಸಾಮಾನ್ಯ ಸಾಹಸಪ್ರವೃತ್ತಿಗಳು, ಇಲ್ಲಿ ನೋಡಬಹುದು. ಅದಲ್ಲದೆ ಬೀರಪ್ಪನ ಮದುವೆ ಕೂಡ ಇದರಲ್ಲಿ ಮುಖ್ಯವಾದುದಾಗಿದೆ. ಹಾಲುಮತ ಕಾವ್ಯದ ಪ್ರಮುಖ ಕಥೆಯ ವೃತ್ತಾಂತವೆಂದರೆ ಲಿಂಗ ದೇವರಾಗಿ ಬೀರಪ್ಪ ನಿಲ್ಲುವುದು ಇಲ್ಲಿ ಕೆಟ್ಟವರ ಸಂಹಾರ, ಸಮುದಾಯ ರಕ್ಷಣೆ, ವೀರತ್ವ, ಪವಾಡಪುರುಷನಾಗಿ ಬೀರಪ್ಪ ಮೆರೆಯುತ್ತಾನೆ. ನಂತರದಲ್ಲಿ ಮಹಾಶಿಷ್ಯನಾದ ಮಾಳಿಂಗರಾಯನ ಪೂರ್ವಕತೆ ಅವನ ಜೀವನ, ಬೀರಪ್ಪನ ಸೇವೆ, ಹೀಗೆ ಶಿವನ ಶಿಷ್ಯನಾಗಿ ಬಸವನಂತೆ ಕಾವ್ಯದಲ್ಲಿ ಮಾಳಿಂಗರಾಯ ನಿಲ್ಲುವನು. ಭಕ್ತಿ, ನಂಬಿಕೆ, ಪ್ರೀತಿ, ಮಮತೆ, ಕಾಯಕ, ಮುಂತಾದವುಗಳು ಮಾಳಿಂಗರಾಯನಲ್ಲಿ ಜೀವಂತಿಕೆಯಾಗಿರುವುದನ್ನು ಕಾವ್ಯದುದ್ದಕ್ಕೂ ಗಮನಿಸಬಹುದಾಗಿದೆ. ನಂತರದ ವೃತ್ತಾಂತದಲ್ಲಿ ಅನೇಕ ಶರಣರ ವೃತ್ತಾಂತಗಳು ಬಂದು ಹೋಗುತ್ತವೆ. ಅವುಗಳಲ್ಲಿ ದಾನ, ಧರ್ಮ, ಶಾಂತಿ, ಕಾಯಕದ ರೀತಿ, ನೀತಿ ಮತ್ತು ಪವಾಡಗಳು, ಸಮುದಾಯದ ರಕ್ಷಣೆಯಲ್ಲಿ ಅವರ ಮಹತ್ತರ ಕೊಡುಗೆಗಳು ಮಹಾಕಾವ್ಯದಲ್ಲಿ ಕಥೆಯಾಗಿ ಹರಿಯುತ್ತ ಬಂದಿವೆ. ಮಹಾಕಾವ್ಯದ ತುಂಬಾ ದೇವರ ಲೀಲಾವಿಲಾಸದ ಚೇತನಗಳೇ ಕಂಡುಬಂದಿವೆ. ದೇವರ ರೂಪವೇ ಮಾನವ ರೂಪವಾಗಿ ಜನಸಾಮಾನ್ಯರ ಜೀವನಕ್ಕೆ ದಾರಿದೀಪವಾಗಿರುವ ಅಂಶವೇ ಮಹಾಕಾವ್ಯದಲ್ಲಿ ಗಮನಾರ್ಹವಾದುದು.

ಮಹಾಕಾವ್ಯದ ಸೃಷ್ಟಿ ಅದ್ಭುತವಾದುದಾಗಿದೆ. ಉತ್ತರ ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕಿನ ಸೈದಾಪುರ ಗ್ರಾಮದ ಕೃಷಿಕ ಸಿದ್ದಪ್ಪ ಮೇಟಿಯವರು ಹಾಲುಮತಸ್ಥರು. ಇವರಿಗೆ ಪೂರ್ವಜರಿಂದ ಬಳುವಳಿಯಾಗಿ ಬಂದಿರುವ ಕಾವ್ಯದ ಕಥೆಯ ತಿರುಳನ್ನು ಅವರು ಒಬ್ಬರೆ ಲೀಲಾಜಾಲವಾಗಿ ಹಾಡಿದ್ದಾರೆ. ಇದೊಂದು ಮಹಾಕಾವ್ಯವಾಗಿ ಅವರಲ್ಲಿ ಅದು ರಕ್ತಗತವಾಗಿ ಹರಿದುಬಂದಿದೆ. ಅನೇಕ ಕಥಾನಕಗಳ ಗುಚ್ಛದಿಂದ ಮಹಾಕಾವ್ಯ ರೂಪುಗೊಂಡಿದೆ. ಅದರಲ್ಲಿ ಅನೇಕ ವೃತ್ತಾಂತಗಳು ತುಂಬಿಕೊಂಡಿವೆ. ಈ ಕಾವ್ಯವನ್ನು ವೃತ್ತಿಗಾಯಕರು, ಹವ್ಯಾಸಿಗಾಯಕರು ಹಾಡಿ ಸೃಷ್ಟಿಕರ್ತರಾಗಿದ್ದಾರೆ. ಮಹಾಕಾವ್ಯದ ಸೃಷ್ಟಿಯಲ್ಲಿ ದೇವರ ನೆನೆಯುವುದು ದೇವರನ್ನು ಪೂಜಿಸುವುದು, ದೇವರಿಗೆ ಹೆಸರುಗಳ ನೀಡುವುದು, ಸಮುದಾಯದ ರಕ್ಷಣೆಗಾಗಿ ಹೋರಾಡಿದ ವೀರರೆಲ್ಲರು ದೈವಸಮಾನರೆಂಬ ನಂಬಿಕೆ, ಮೋಹವನ್ನು ಗೆಲ್ಲುವುದು, ಸಮುದಾಯಕ್ಕಾಗಿ ನಾಯಕರ ಬಲಿದಾನ ಅನೇಕ ಉಪಕಥೆಗಳು ಹೀಗೆ ಎಲ್ಲಾ ಗುಣಗಳು ಸೇರಿ ಮಹಾಕಾವ್ಯ ಸೃಷ್ಟಿಯಾಗಿದೆ.

ಮಹಾಕಾವ್ಯದ ಸಂಸ್ಕೃತಿ ಕಾಯಕ, ನಂಬಿಕೆ, ಹೋರಾಟ, ಬಲಿದಾನ ಮುಂತಾದವು ಕಾವ್ಯದ ಸಂಸ್ಕೃತಿಯಾಗಿ ಹೊರಬಂದಿವೆ. ದೇವರ ಲೀಲಾವಿಲಾಸದ ಚೇತನಾಂಶಗಳು ಸಂಸ್ಕೃತಿಯ ಅನೇಕ ರೂಪಗಳಾಗಿವೆ.

ಮಹಾಕಾವ್ಯದ ರೂಪ ಶಿವನಾಗಿದ್ದು, ಸಂಕೇತವು ಕಾವ್ಯವಾಗಿದ್ದು, ಪ್ರತಿಮೆಯು ಹಾಲುಮತ ಸಮುದಾಯವಾಗಿದೆ. ಏಕೆಂದರೆ ಇಲ್ಲಿ ಕಾವ್ಯದ ರೂಪವೇ ಶಿವನಾಗಿ ಕಂಡುಬಂದಿದೆ. ಆತನ ಪವಾಡಗಳು, ಸೃಷ್ಟಿಯ ವ್ಯವಸ್ಥೆಯು ಎಲ್ಲಾ ದೈವಾಂಶದಿಂದ ಕೂಡಿದ್ದಾಗಿದೆ. ಅಲ್ಲದೆ ಮಹಾಕಾವ್ಯದ ಸಂಕೇತವಾಗಿ 'ಕಾಯಕ'ವು ಗಮನಾರ್ಹವಾಗಿದೆ. ಹಾಲುಮತಸ್ಥರು ಕಾಯಕ ಯೋಗಿಗಳೆಂದು ಪ್ರತಿಬಿಂಬಿಸಲು ಹಾಲುಮತ ಕಾವ್ಯದಲ್ಲಿ ಸಂಕೇತವಾಗಿದೆ ಕಾಯಕ. ಅಲ್ಲದೆ ಜೀವಿಸುವ ಪರಿಕಲ್ಪನೆಯು ಕೂಡ ಅಲ್ಲಿ ರೂಪ ತಾಳಿದೆ. ಇದೆಲ್ಲವನ್ನು ಸಮುದಾಯ ಪ್ರತಿಮೆಯಾಗಿ ಅಂದರೆ ಮಾದರಿಯಾಗಿ, ಗೌರವವಾಗಿ, ಸಂಪ್ರದಾಯವಾಗಿ ಸ್ವೀಕರಿಸಿ ಅದನ್ನು ಜೀವಾಳವನ್ನಾಗಿ ಅದು ನಿರ್ವಹಿಸಿಕೊಂಡು ಹೋಗುತ್ತಿದೆ. ಸಮುದಾಯದ ಉಸಿರು ಸಂಪ್ರದಾಯವಾಗಿದೆ.

ಮಹಾಕಾವ್ಯದಲ್ಲಿ ಮಾಂತ್ರಿಕ ಪವಾಡಗಳ ದೃಶ್ಯಗಳು ಮನಮೋಹಕವಾಗಿವೆ. ಇವು ದೈವಾಂಶದಿಂದ ಕೂಡಿದ್ದು, ದೇವರ ಅನುಗ್ರಹದಂತೆ ಇಲ್ಲಿ ಪಾತ್ರವಹಿಸಿವೆ. ಮಾಂತ್ರಿಕ ಪವಾಡಗಳು ದುಷ್ಟ ಸಂಹಾರಕ್ಕೆ, ಜನಲೋಕಕಲ್ಯಾಣಕ್ಕೆ ಬಳಕೆಯಾಗಿರುವುದು ಮಹಾಕಾವ್ಯದಲ್ಲಿ ವಿಶೇಷತೆಯಿಂದ ಕೂಡಿದೆ. ಇವುಗಳಿಂದ ಕಾವ್ಯದಲ್ಲಿ ರಮ್ಯತೆ, ನಿಗೂಢತೆ, ಭಯಾನಕತೆ, ನೋಡಬಹುದಾಗಿದೆ.

ಹಾಲುಮತ ಮಹಾಕಾವ್ಯದಲ್ಲಿ ಪರಂಪರೆಯ ಸೊಗಡು ವೈಭವತೆಯಿಂದ ಕೂಡಿದೆ. 'ಹಾಲುಮತಸ್ಥರ ಜೀವನ ಚಿತ್ರಣವನ್ನು' ಪರಂಪರೆಯಾಗಿ ಕಾವ್ಯದಲ್ಲಿ ಗಮನಿಸಬಹುದಾಗಿದೆ. ಅಲ್ಲದೆ ಪ್ರದರ್ಶನಾತ್ಮಕವಾಗಿ ಮಹಾಕಾವ್ಯವನ್ನು ಹಬ್ಬ-ಹರಿದಿನಗಳಲ್ಲಿ ಜನಸಾಮಾನ್ಯರೆದುರು ಹಾಡಿ ಅವರ ಜೀವನ ಮೌಲ್ಯಗಳ ಬದಲಾವಣೆಯಲ್ಲಿ ಮಹಾಕಾವ್ಯ ಗಮನಾರ್ಹ ಅಂಶವಾಗಿದೆ. ಕಾವ್ಯದಿಂದ ಸಮುದಾಯದ ಸಮಗ್ರ ಚಿತ್ರಣ

ಜನರ ಜೀವನದ ಮೇಲೆ ಪ್ರಭಾವ ಬೀರುತ್ತದೆ. ಇದರಿಂದ ಸೃಜನತೆ, ನೈಜತೆ, ಪ್ರೀತಿ ಇವುಗಳನ್ನು ಅವರಿಂದ ಪಡೆಯಬಹುದಾಗಿದೆ.

ಸಾಮಾಜಿಕ ಮೌಲ್ಯಗಳನ್ನು, ಸಾಮಾಜಿಕ ಬದಲಾವಣೆಗಳನ್ನು, ಮಹಾಕಾವ್ಯವು ನೀಡಬಲ್ಲುದಾಗಿದೆ. ಸಮುದಾಯದ ಸಾಮಾಜಿಕ ಚಿತ್ರಣ ನೀಡುವುದಲ್ಲದೆ ಮಾನವಕುಲಕ್ಕೆ ಮಹಾಕಾವ್ಯವು ಕೈಗನ್ನಡಿಯಾಗಿದೆ. ಉನ್ನತ ಜೀವನದ ಮೌಲ್ಯಗಳನ್ನು ಬೆಳೆಸಿಕೊಳ್ಳುವಲ್ಲಿ ಮಹಾಕಾವ್ಯದ ಪಾತ್ರ ಅಮೋಘವಾದುದಾಗಿದೆ. ಅದು ಜೀವಂತಿಕೆಯ ಚೇತನವಾಗಿ ಬೆಳೆದುಕೊಂಡು ಬಂದಿದೆ.

ಹೀಗೆ ಹಾಲುಮತ ಮಹಾಕಾವ್ಯವು ಸಮುದಾಯದ ಜೀವನ ವಿಧಾನದೊಂದಿಗೆ ಬೆಸೆದುಕೊಂಡು, ಅಲ್ಲಿನ ಸೃಷ್ಟಿ, ಸಂಸ್ಕೃತಿ, ಪರಂಪರೆ, ಜೀವನ ರೀತಿನೀತಿ, ಸಾಮಾಜಿಕ ಭದ್ರತೆ, ನಂಬಿಕೆಗಳು ಎಲ್ಲವನ್ನೂ ಮಹಾಕಾವ್ಯವು ತಿಳಿಯಪಡಿಸುತ್ತದೆ. ಸಮಾಜದಲ್ಲಿ ಅದಕ್ಕೊಂದು ಮೌಲ್ಯ ತಂದುಕೊಡುವ ಸಂಸ್ಕೃತಿ ಮಹಾಕಾವ್ಯದ ಜೀವಂತಿಕೆಯಾಗಿದೆ. ಜನಪದರ ಹೃದಯ ಶ್ರೀಮಂತಿಕೆಯಲ್ಲಿ ಹಾಲುಮತ ಮಹಾಕಾವ್ಯವು ಇಂದಿಗೂ ಉಸಿರಾಡುತ್ತಿದೆ.

ಇಂದಿನ ಆಧುನಿಕತೆಯಲ್ಲಿ ಜೀವನ ಶೈಲಿ ಬದಲಾಗುತ್ತಾ ಸಂಪ್ರದಾಯ ಕಣ್ಮರೆಯಾಗುತ್ತಿದೆ. ಬೆಳೆದು ಬಂದ ದಾರಿಯನ್ನೆ ಮರೆಯುತ್ತಿರುವ ಸಮುದಾಯಗಳು ಇಂದು ಚಿಂತನೆ ನಡೆಸಬೇಕಾಗಿದೆ. ಅವುಗಳ ರಕ್ಷಣೆ, ಆಚಾರ, ವಿಚಾರವನ್ನು ಶ್ರೀಮಂತಗೊಳಿಸಬೇಕಾಗಿದೆ. ಗೌಣವಾಗಿ ಕಣ್ಮರೆಯಾಗಿರುವ ಕಾವ್ಯದ ವಸ್ತುವನ್ನು ಅರಿಯಬೇಕಾಗಿದೆ. ಮುಂದಿನ ಹಾದಿಯಲ್ಲಿ ಇವುಗಳನ್ನೆಲ್ಲ ಚಿಂತಿಸಬೇಕಾಗಿದೆ. ಪರಿಹಾರ ಕಂಡುಕೊಳ್ಳಬೇಕಾಗಿದೆ. ಚರಿತ್ರೆಯ ಸಂಸ್ಕೃತಿ ಉಳಿಸಬೇಕಾಗಿದೆ.

## ಆಕರ ಸಾಹಿತ್ಯ


೧. ವೀರಣ್ಣದಂಡೆ, ಸಂ., **ಜನಪದ ಹಾಲುಮತಮಹಾಕಾವ್ಯ**, ಕನ್ನಡ ಪುಸ್ತಕ ಪ್ರಾದಿಕಾರ, ಬೆಂಗಳೂರು, ೨೦೦೦

೨. ಡಾ. ಮೊಗಳ್ಳಿ ಗಣೇಶ್, **ಮೌಖಿಕ ಕಥನ**, ಪ್ರಸಾರಾಂಗ, ಕ.ವಿ.ವಿ.ಹಂ, ೨೦೦೬

೩. ಬೋ. ನ. ಬಸವರಾಜ್, **ಹಾಲುಮತದ ಹುಟ್ಟು**, ಕಾಯಕರತ್ನ ಮೈ.ಮಾ.ಮೆಣಸಗಿ ವಿದ್ಯಾನಿಧಿ, ಪ್ರಕಾಶನ, ಗದಗ, ೨೦೦೩

೪. ಡಾ. ವೀರಣ್ಣ ದಂಡೆ, **ದೇಸಿ**, ಭಾಗ್ಯಶ್ರೀ ಎಂಟರ್‌ಪ್ರೈಸಸ್, ಬೆಂಗಳೂರು, ೨೦೦೩

೫. ಬ.ಪ.ನಾಯ್ಕರ, **ಹಾಲುಮತಸ್ಥರು**, ಕಾಯಕರತ್ನ ಮೈ.ಮಾ.ಮೆಣಸಗಿ ವಿದ್ಯಾನಿಧಿ, ಪ್ರಕಾಶನ, ಗದಗ, ೨೦೦೩

೬. ಪ್ರೊ. ಒಡೆಯರ್ ಡಿ. ಹೆಗ್ಗಡೆ, **ಹಾಲುಮತ ಕುರುಬ ಜನಾಂಗದ ಅಭಿವೃದ್ಧಿ ಸಮಸ್ಯೆಗಳು**, ಪಬ್ಲಿಷ್ ಸೆಂಟರ್ ಆಫ್ ವುಮೆನ್ ಡೆವಲಪ್‌ಮೆಂಟ್ಸ್ ಸ್ಟಡೀಸ್, ಮೈಸೂರು, ೨೦೦೩

೭. ಪ್ರೊ. ಒಡೆಯರ್ ಡಿ. ಹೆಗ್ಗಡೆ, **ಕವಲು ದಾರಿಯಲ್ಲಿ ಕರ್ನಾಟಕದ ಕುರುಬ ಜನಾಂಗ**, ಪಬ್ಲಿಷ್ ಸೆಂಟರ್ ಆಫ್ ವುಮೆನ್ ಡೆವಲಪ್‌ಮೆಂಟ್ಸ್ ಸ್ಟಡೀಸ್, ಮೈಸೂರು, ೨೦೦೩

೮. ಚಂದ್ರಕಾಂತ ಬಿಜ್ಜಲಗಿ, **ಕುರುಬರ ಹೆಜ್ಜೆಗಳು ಒಂದು ಅಧ್ಯಯನ**, ಶೈಲಚಂದ್ರ ಪ್ರಕಾಶನ, ಬಿಜಾಪುರ, ೨೦೦೬

೯. ಡಾ. ಮೊಗಳ್ಳಿ ಗಣೇಶ್, **ದೇಶಿ**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೭

೧೦. ದೇ. ಜವರೇಗೌಡ, **ಜನಪದ ಅಧ್ಯಯನ**, ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಮೈಸೂರು, ೨೦೦೧

೧೧. ಡಾ. ಹೆಬ್ಬಾಲೆ ಕೆ. ನಾಗೇಶ್, **ಜಾನಪದ ಬನಸಿರಿ**, ರುಚಿರ ಪ್ರಕಾಶನ, ಹೊಸಪೇಟೆ, ೨೦೦೨

೧೨. ಡಾ. ಸ.ಚಿ.ರಮೇಶ್, **ಸ್ಯಾ.ಸಿ. ಚೆನ್ನಮ್ಮನ ಕಾವ್ಯ**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೯

೧೩. ಡಾ. ಮಂಜುನಾಥ ಬೇವಿನಕಟ್ಟಿ, **ಮೈಲಾರಲಿಂಗನ ಕಾವ್ಯ**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೯

೧೪. ಡಾ. ಸಿ. ಟಿ. ಗುರುಪ್ರಸಾದ್, ಸಂ., **ಕನ್ನಡ ಜಾನಪದ ಗ್ರಂಥ ಸೂಚಿ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೦

೧೫. ಡಾ. ಚೆಲುವರಾಜು, **ಜುಂಜಪ್ಪ**, ಪ್ರಸಾರಾಂಗ, ಕ.ವಿ.ವಿ.ಹಂ., ೧೯೯೭

೧೬. ಡಾ. ಎಂ. ಚಿದಾನಂದ ಮೂರ್ತಿ, **ಜನ, ಜನಪದ, ಜಾನಪದ**, ಸಮಗ್ರಸಂಪುಟ ೩, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

೧೭. ಜೀ.ಶಂ. ಪರಮಶಿವಯ್ಯ, **ಜನಪದ**, ಸತ್ಯಸಾಧನ ಪ್ರಕಾಶನ, ಮೈಸೂರು, ೧೯೭೮

೧೮. ಡಾ. ಡಿ. ಬಿ. ನಾಯಕ್, **ದೇಶಿ ಸಂಸ್ಕೃತಿ**, ಬಂಜಾರ ಪ್ರಕಾಶನ, ಗುಲ್ಬರ್ಗಾ, ೨೦೦೨

೧೯. ಹಿ.ಶಿ. ರಾಮಚಂದ್ರೇಗೌಡ, **ಜಾನಪದ ಗ್ರಹಿಕೆ ಪರಿಕಲ್ಪನೆ**, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೪

೨೦. ಎಸ್.ಬಿ. ಪದ್ಮಪ್ರಸಾದ್, **ಜಾನಪದ ವರ್ಷ**, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೩

